ಕುವೆಂಪು ಮತ್ತು ಪು.ತಿ.ನ. ವಿಶೇಷಾಂಕ

2005

18 - 1

# ಕರ್ನಾಟಕ ಲೋಚನ

ಸಂಪುಟ-೧೮ ಜೂನ್ ೨೦೦೫ ಸಂಚಿಕೆ-೧



ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ

# 'ಕರ್ನಾಟಕಲೋಚನ'

***ಸಂಪಾದಕ ಮಂಡಲಿ***

ಡಾ|| ಟಿ. ವಿ. ವೆಂಕಟಾಚಲಶಾಸ್ತ್ರೀ (ಅಧ್ಯಕ್ಷರು), ಎಸ್. ವಿ. ಶ್ರೀನಿವಾಸರಾವ್, ಡಾ|| ಎನ್. ಸುಬ್ರಹ್ಮಣ್ಯಂ, (ಸಂಪಾದಕರು), ಎನ್. ಎಸ್. ರಾಮಸ್ವಾಮಿ ಅಯ್ಯರ್ (ಸಹಾಯಕ ಸಂಪಾದಕರು), ಪ್ರೊ|| ನಾ. ಗೀತಾಚಾರ್ಯ ( ವ್ಯವಸ್ಥಾಪಕ ಸಂಪಾದಕರು)

***ಸದಸ್ಯರು***

ಪ್ರೊ|| ಜಿ. ವೆಂಕಟಸುಬ್ಬಯ್ಯ, ಪ್ರೊ|| ಎಲ್. ಎಸ್.ಶೇಷಗಿರಿರಾವ್, ಡಾ|| ಎಂ. ಚಿದಾನಂದಮೂರ್ತಿ, ಡಾ|| ಶ್ರೀನಿವಾಸ ಹಾವನೂರ, ಮಂಗಳೂರು, ಡಾ|| ಬಿ. ರಾಮಚಂದ್ರರಾವ್, ಹೈದರಾಬಾದು, ಪ್ರೊ|| ವಸಂತ ಕುಷ್ಟಗಿ, ಗುಲ್ಬರ್ಗ, ಎನ್. ಬಸವಾರಾಧ್ಯ, ಎಸ್. ಶಿವಣ್ಣ, ಡಾ|| ಪಿ. ವಿ. ನಾರಾಯಣ, ಪ್ರೊ|| ಕೆ. ಆರ್. ಗಣೇಶ್, ಬೆಂಗಳೂರು, ಡಾ|| ಆರ್. ಶೇಷಶಾಸ್ತ್ರೀ, ಅನಂತಪುರ, ಎಸ್. ಪಿ. ಪಾಟೀಲ, ಧಾರವಾಡ, ಡಾ|| ಶ್ರೀ ಕೃಷ್ಣಭಟ್ ಅರ್ತಿಕಜೆ, ಮದರಾಸು.

***ಲೇಖನಗಳು-ಟಿಪ್ಪಣಿಗಳು***

ವಿದ್ವತ್ಪೂರ್ಣ ಲೇಖನಗಳನ್ನು ಹಾಗೂ ಹೊಸದಾಗಿ ಪ್ರಕಟವಾಗುವ ಉತ್ತಮ ಮಟ್ಟದ ಸಂಶೋಧಿತ-ಸಂಪಾದಿತ ಗ್ರಂಥಗಳು ಮತ್ತು ಶಾಸ್ತ್ರ ಸಾಹಿತ್ಯದ ಗ್ರಂಥಗಳು-ಇವುಗಳ ಮೇಲಣ ವಿಮರ್ಶೆಗಳು, ವಿದ್ವದ್ವಿಚಾರ ಮತ್ತು ವಿದ್ವತ್ ಪ್ರಪಂಚದ ವಿದ್ಯಮಾನ, ಇವುಗಳಿಗೆ ಸಂಬಂಧಿಸಿದ ಟೀಕೆ-ಟಿಪ್ಪಣಿಗಳು ಇವುಗಳಿಗೆ 'ಕರ್ನಾಟಕ ಲೋಚನ' ಮೀಸಲಾಗಿದೆ.

ಯಾವುದೇ ಲೇಖನದಲ್ಲಿ ಮತ್ತು ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ಆಯಾ ಲೇಖಕರೇ ಜವಾಬುದಾರರು; ಅವು ಅವಶ್ಯವಾಗಿ ಪ್ರತಿಷ್ಠಾನದ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳು ಎಂದು ತಿಳಿಯತಕ್ಕದ್ದಲ್ಲ.

***ಲೇಖನಗಳಿಗೆ ಆಹ್ವಾನ***

ಮೇಲ್ಕಂಡಂತೆ ವ್ಯಕ್ತಪಟ್ಟಿರುವ ಆಶಯಕ್ಕೆ ಅನುಗುಣವಾಗಿ ಲೇಖನಗಳನ್ನು ವಿದ್ವಾಂಸರೂ, ಭಾಷೆ ಸಾಹಿತ್ಯಗಳ ಪ್ರೌಢ ವಿದ್ಯಾರ್ಥಿಗಳೂ ಕಳುಹಿಸಿಕೊಡಬೇಕೆಂದು ವಿನಂತಿ. ಲೋಚನದ ಗಾತ್ರ ಪರಿಮಿತವಾದ್ದರಿಂದ ಲೇಖನಗಳು ಅಚ್ಚಿನ 6-7 ಪುಟಗಳಲ್ಲಿ ಇದ್ದರೆ ಅನುಕೂಲ. ಲೇಖನಗಳು ಹಾಳೆಯ ಒಂದೇ ಪಕ್ಕದಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಅಡಿಟಿಪ್ಪಣಿಗಳನ್ನು ಪುಟದ ಅಡಿಯಲ್ಲಿಯೇ ಕಾಣಿಸುವುದು ಒಳಿತು. ಗ್ರಂಥ-ಲೇಖನಾಧಾರ ವಿವರಗಳನ್ನು ಲೇಖನದ ಕಡೆಯಲ್ಲಿ ಕೊಡಬಹುದು. ಲೇಖನವನ್ನು ಹಿಂದಿರುಗಿಸಲಾಗದ್ದರಿಂದ ಲೇಖಕರು ತಮ್ಮ ಲೇಖನದ ಒಂದು ಪ್ರತಿಯನ್ನು ಉಳಿಸಿಕೊಂಡಿರಬೇಕಾಗಿ ವಿನಂತಿ.

***ವಿಮರ್ಶೆಗಾಗಿ ಗ್ರಂಥಗಳ ಎರಡು ಪ್ರತಿಗಳನ್ನು ಕಳುಹಿಸಬೇಕು***

ಸೃಜನಾತ್ಮಕ ಗ್ರಂಥಗಳನ್ನು ಸಾಧಾರಣವಾಗಿ ವಿಮರ್ಶೆ ಮಾಡಲಾಗುವುದಿಲ್ಲ. ಆದರೆ, ಕಳಿಸಿದರೆ ವೈಶಿಷ್ಟ್ಯವುಳ್ಳ ಅಂಥ ಗ್ರಂಥಗಳನ್ನು ಸಾಧ್ಯವಾದರೆ ಅವಲೋಕನ ಮಾಡಿಸಲಾಗುವುದು.

# ಕರ್ನಾಟಕ ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ,** ಬಿ.ಎಂ.ಶ್ರೀ. ಕಲಾಭವನ

೨/೪ನೇ ಮುಖ್ಯ ರಸ್ತೆ, ಎನ್.ಆರ್. ಕಾಲೋನಿ, ಬೆಂಗಳೂರು-೫೬೦-೦೧೯

ದೂರವಾಣಿ : ೨೬೬೧೫೪೮೭೭ ಇಮೇಲ್ : bmsri/trust@yahoo.com

ವೆಬ್‌ಸೈಟ್ : http:in.members.tripodasla.com/bmsri/



ಸಂಪುಟ-೧೮ ಜೂನ್ ೨೦೦೫ ಸಂಚಿಕೆ-೧

## ಡಾ|| ಕುವೆಂಪು ಮತ್ತು ಡಾ|| ಪು.ತಿ.ನ. ಶತಮಾನ ವಿಶೇಷಾಂಕ

## ಪರಿವಿಡಿ

# KARNATAKA LOCHANA

Half-Yearly Research Journal, Published by

**B.M. Sri Smaraka Prathisthana**

(B.M.Sri Memorial Fundation) N.R.Colony, Bangalore-560 019

Ph. : 26615877 e-mail : bmsri/trust@yahoo.com

Website : http:in.members.tripodasla.com/bmsri/





Vol. 18 June 2005 No. 1


**Dr. KUVEMPU & Dr. PU.THI.NA. CENTINARY SPECIAL ISSUE**

**CONTENTS**

# ಸಮಸ್ಯಾ ಪೂರಣ

ವಿದ್ವತ್ಪತ್ರಿಕೆಯಾಗಿರುವ ಕರ್ನಾಟಕ ಲೋಚನದಲ್ಲಿ ಸಂಪುಟ 9, ಸಂಚಿಕೆ 1 ಜೂನ್ 1993 ಮೊದಲ್ಗೊಂಡು ಸಮಸ್ಯಾಪೂರಣ ಎಂಬ ಅಂಕಣವನ್ನು ಪ್ರಾರಂಭಿಸಲಾಗಿದೆ. ಇದು ಕನ್ನಡಕ್ಕೆ ಅತಿಶಯ ಲಕ್ಷಣವೆನಿಸುವ ಪ್ರಾಸ-ಪಾದ-ಛಂದೋಬದ್ಧ ಪದ್ಯ ಕವಿತಾ ರಚನೆಗೆ ಸಜೀವತೆಯನ್ನು ನೀಡುವ ಉದ್ದೇಶವುಳ್ಳದ್ದು. ಪ್ರತಿ ಸಂಚಿಕೆಯಲ್ಲಿಯೂ ಅದರ ಮುಂದಿನ ಸಂಚಿಕೆಗಾಗಿ ಸಮಸ್ಯಾಪದ್ಯದ ಒಂದು ಪಾಠವನ್ನು ಕೊಡಲಾಗುತ್ತದೆ. ಒಬ್ಬೊಬ್ಬರಿಂದ ಒಂದೊಂದು ಪದ್ಯ ಮಾತ್ರ ಸ್ವೀಕಾರಾರ್ಹ.

ಸಮಸ್ಯೆ : 'ಮಾರಿಗೆ ವಲ್ಲಭನು ರಾಮನೆಂಬುದೆ ಖಚಿತಂ'

ಸೂಚಕರ ಪರಿಹಾರ ?

1. ಧಾರಿಣಿ ಪುತ್ರಿಯ ಮದುವೆಗೆ
   ಗೌರಿಯ ಪತಿ ಶಿವನ ಧನುವನೆ ಪಣಕ್ಕಿಟ್ಟಾ
   ಸೂರಿಯೆಹ ದೊರೆ ಜನಕನ ಕು
   ಮಾರಿಗೆ ವಲ್ಲಭನು ರಾಮನೆಂಬುದೆ ಖಚಿತಂ ॥

-ಎಂ. ಆರ್. ಅನಂತರಾಮಯ್ಯ

2. ಹೈರಾಣಾಗುತ ರಾವಣ
   ಜಾರಲು ಸಭೆಯಿಂ ಉದಯಾದ್ರಿಯ ದಿನಕರನೇನೆ
   ತೋರಿತು ಜನರಿಗೆ ಜನಕಕು
   ಮಾರಿಗೆ ವಲ್ಲಭನು ರಾಮನೆಂಬುದೆ ಖಚಿತಂ ॥

-ಡಾ॥ ಪಿ. ವಿ. ನಾರಾಯಣ

3. ಎಲ್ಲಿಯ ರಾಮಾಯಣ ಎಲ್ಲಿಯ ಸೀತಾಯಣ !
   ಎಲ್ಲೆಲ್ಲು ತುಂಬಿರುವಾಗ ರಾವಣ ! ರಾವಣ!
   ಶಾಲೆ ಕಾಲೇಜು ಕಚೇರಿಗಳಲ್ಲಿ
   ಸಾಲು ಅಂಗಡಿ ಬೀದಿ ಬದಿಗಳಲ್ಲಿ
   ಎಲ್ಲೋ ಏಕೆ ಮನೆ ಮಂದಿಯಲ್ಲೇ
   ಖುಲ್ಲ ರಾವಣ ಹೊಂಚುತಿರುವಾಗ
   ಫುಲ್ಲಲೋಚನೆ, ಪಾಪ, ಜನಕ ಕು'ಮಾರಿಗೆ
   ವಲ್ಲಭನು ರಾಮನೆಂಬುದೆ ಖಚಿತಂ' ಎಂದು
   ಎಲ್ಲಿ ಹೇಗೆ ಹೇಳಲಿ ಈ ಕಲಿಗಾಲದಲ್ಲಿ
   ಬಾಲೆ ಸೀತೆ ಎಚ್ಚರವಿರಲಿ ನಿನ್ನ ಹೆಜ್ಜೆಗಳಿಗೆ

-ಪ್ರೊ॥ ನಾ. ಗೀತಾಚಾರ್ಯ

4. ಒರಗೆ ಜತೆ ಸೆಂಡಾಡಲ್
ಸಾರಲಲುಗದೆ ಶಿವಧನು ರಥತಲದಿ ಸೇರಿರೆ ।
ಕರದಿಂ ನೂಂಕಿದ ಜನಕ ಕು
ಮಾರಿಗೆ ವಲ್ಲಭನು ರಾಮನೆಂಬುದೆ ಖಚಿತಂ ।

-ಕೆ. ರಘುರಾಮ ಭಟ್

5. ಮುರಾರಿಯ ಹಿರಿಧನುವದ-
ವಾರಾರೋ ಪಿಡಿದು ದೆಯ ನೇರಿ ಪುದುಂಟೇ
ಮಾರಾಂಕನಪಿತ ವಿಜಯ ಕು-
ಮಾರಿಗೆ ವಲ್ಲಭನು ರಾಮನೆಂಬುದೆ ಖಚಿತಂ

-ಡಾ।। ಉಪ್ಪಂಗಳ ರಾಮಭಟ್ಟ

6. ಕಂದ।। ಶ್ರೀರಾಮ ಚರಿತಮಂ ನಿಜ
ನಾರೀಮಣಿ ಗಿರಿಜೆಹೊರೆದು ಭಕ್ತಿಯ ನವ ಕೊಳ್
ಪ್ರೇರಿಸಿದ ಕಾರಣದೆ ಕಾ
ಮಾರಿಗೆ ವಲ್ಲಭನು ರಾಮನೆಂಬುದೆ ಖಚಿತಂ ।।

-ಪ್ರೊ।। ಟಿ. ಕೇಶವ ಭಟ್ಟ

7. ಕೊಲ್ಲುವವನಾಗಿ ಶರಣರಪಾಲಿಸುವನಾಗಿ
ಫುಲ್ಲಾಕ್ಷ ಸಖನಾದ ರಾಮಭಕ್ತ
ವಲ್ಲಭೆಗೆ ರಾಮಕಥೆಯಾರೆದ ಕಾಮಾರಿಗೇ
ವಲ್ಲಭನು ರಾಮನೆಂಬುದೆ ಖಚಿತವು
ಪ್ರೀತಿಪಾತ್ರ

ಗಮಕಿ ಆರ್. ಶಂಕರನಾರಾಯಣ್

ಮುಂದಿನ ಸಂಚಿಕೆಯ ಸಮಸ್ಯೆ
'ಮೊಕದೊಳೆ ದೀವಿಗೆಯ ಹಚ್ಚಿ ಸಂತೋಷಿಸುವರ್'
'ಕಂತಿ ಪಂಪ (ಅಭಿನವ ಪಂಪ) ಸಮಸ್ಯೆಗಳು' ಗ್ರಂಥದಿಂದ

* * * *

# ಶತಮಾನೋತ್ಸವ ಸ್ಮರಣೆ
## ಕವಿಪುಂಗವ-ನಿಸರ್ಗ ಸಾಹಿತ್ಯದ ಹರಿಕಾರ-ಕುವೆಂಪು



**ಎಸ್. ವಿ. ಶ್ರೀನಿವಾಸರಾವ್**

ಎಲ್ಲಾದರೂ ಇರು; ಎಂತಾದರೂ ಇರು
ಎಂದೆಂದಿಗೂ ನೀ ಕನ್ನಡವಾಗಿರು
ಕನ್ನಡ ಗೋವಿನ ಓ ಮುದ್ದಿನಕರು
ಕನ್ನಡತನವೊಂದಿದ್ದರೆ ನೀನಮ್ಮಗೆ ಕಲ್ಪತರು
(ಮೆಟ್ಟುವ ನೆಲ ಕರ್ನಾಟಕ)

ಕನ್ನಡ ನಾಡಿನ ರಸ ಋಷಿ, ಮಹಾಕವಿ, ಸಾಹಿತ್ಯದಿಗ್ಗಜ ಕುವೆಂಪು ಕಾವ್ಯನಾಮದಿಂದ ಜಗದ್ವಿಖ್ಯಾತರಾಗಿರುವ ಜ್ಞಾನಪೀಠ ಮತ್ತು ಪಂಪ ಪ್ರಶಸ್ತಿ ವಿಜೇತ, ಕರ್ನಾಟಕ ರತ್ನ ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪನವರು ಜನಿಸಿದ್ದು ಡಿಸೆಂಬರ್ 29, 1904, ತೀರ್ಥಹಳ್ಳಿ ತಾಲ್ಲೂಕು ಕುಪ್ಪಳ್ಳಿ ಕುಗ್ರಾಮದಲ್ಲಿ. ಆದರೆ ಇದು ಪ್ರಕೃತಿಜನ್ಯ ಸುಂದರ ಮಲೆನಾಡಿನ ಒಂದು ರಮ್ಯ ತಾಣ. ಶುಭ್ರ ನಿಸರ್ಗ ಮಧ್ಯದಲ್ಲಿ ಆಡಿ ನಲಿದ ಪರಿಣಾಮ ಅವರ ಎಲ್ಲಾ ಕೃತಿಗಳಲ್ಲೂ ಪ್ರತಿಮೆಗಳಾಗಿ ಪ್ರತಿಮಿಸಿರುವುದನ್ನು ನಾವು ಕಾಣಬಹುದು. ತತ್ವವೇತ್ತ ಅನುಭವಿ, ದರ್ಶನ ಸಂಪನ್ನ ಕವಿ ವಿಭೂತಿ, ಅನುಪಮ ಅನುಭವಗಳ ಅನನ್ಯ ಅನುಭಾವಿ, ನಿತ್ಯನೂತನ ಕಲ್ಪನಾ ಸಾಮ್ರಾಜ್ಯದ ಸಾಮ್ರಾಟ. ಕುವೆಂಪು ಕನ್ನಡನಾಡಿನ ಹೆಮ್ಮೆಯ ಕವಿ. ಮರೆಯಲಾರದ ಕಾದಂಬರಿಕಾರ, ರಮ್ಯಸ್ಫೂರ್ತಿಯ ಕಾರಂಜಿಸದೃಶ ಪ್ರಬಂಧಕಾರ, ನವರಸ ಸ್ಫುರಿಸುವ ನಾಟಕಕಾರ ಅಷ್ಟೇ ಅಲ್ಲದೆ ದರ್ಪ ಇಲ್ಲದ ದಕ್ಷ ಅಧಿಕಾರಿಯಾಗಿ 90 ವರ್ಷಗಳ ವಸಂತವನ್ನು ಕಂಡು ನಲಿದ ಮಾಗಿದ ಋಷಿ ಕವಿ ಡಾ|| ಕುವೆಂಪು ಕನ್ನಡನಾಡಿನ ಜನಮನದಲ್ಲಿ ಅಮರವಾಗುಳಿದಿದ್ದಾರೆ.

ಡಾ|| ಕುವೆಂಪುರವರ ಪ್ರಿಯಶಿಷ್ಯ ಪದ್ಮಶ್ರೀ ಪ್ರೊ|| ದೇಜಗೌ ಅವರು ತಮ್ಮಗುರುವನ್ನು ಪರಿಚಯಿಸುವ ಪರಿ ಅಮೋಘ. 'ನಿಸರ್ಗದ ಮಡಿಲಲ್ಲಿ ಹುಟ್ಟಿ, ನಿಸರ್ಗವೇ ಸಹಜ ಗುರುವಾಗಿ ನಿಸರ್ಗ ಸಾಹಿತ್ಯದ ಹರಿಕಾರನಾಗಿ ಮೆರೆದು ವಿಶ್ವದ ವಿರಳ ನಿಸರ್ಗ ಕವಿಗಳಲ್ಲಿ ಗಣ್ಯರಾದವರು ಕನ್ನಡದ ಕುವೆಂಪು.'

ಸುಮಧುರ ಸಂಸಾರದ ಸೂತ್ರಧಾರಿ ಮನಮೆಚ್ಚಿದ ಮಡದಿ-ಹೇಮಾವತಿ, ಸುಪುತ್ರರು : ಪೂರ್ಣಚಂದ್ರತೇಜಸ್ವಿ ಮತ್ತು ಕೋಕಿಲೋದಯ ಚೈತ್ರ. ಸುಪುತ್ರಿಯರು; ಇಂದುಕಲಾ, ತಾರೀಣಿ; ಕವಿಮನೆ ಉದಯ ರವಿ.

ಭಾರತದಲ್ಲಿ ಬಹಳ ಘಂದಿ ಮಹಾಪುರುಷರು ಅವತರಿಸಿ ಹೋಗಿದ್ದಾರೆ. ಮಹಾಕವಿಗಳೂ ತಮ್ಮಕೃತಿಗಳಿಂದಾಗಿ ಅಮರವಾಗುಳಿದಿದ್ದಾರೆ. ಆದರೆ ಮಹಾ ಪುರುಷನೊಬ್ಬ

ಮಹಾಕವಿಯಾಗಿ ಬಾಳಿದುದು ತೀರಾ ವಿರಳ. ಈ ವಿರಳ ಗುಂಪಿಗೆ ಸೇರಿದವರು ಕುವೆಂಪು. ವಿಶ್ವಮಾನವ ದೃಷ್ಟಿಯ ಹರಿಕಾರ, ಶ್ರೀಸಾಮಾನ್ಯ ಪದದ ಸೃಷ್ಟಿಕರ್ತ. ಕುವೆಂಪು ಅವರಿಂದ ಉದ್ಭೂತವಾದದ್ದು ಮನುಜಮತ, ವಿಶ್ವಪಥ, ಸರ್ವೋದಯ ಸಮನ್ವಯ ಪೂರ್ಣದೃಷ್ಟಿ ಪದಗಳು, ಇವೇ ಆಧುನಿಕ ಯುಗದ ದಿವ್ಯಮಂತ್ರವಾಗಬೇಕು ಎಂಬುದು ಅವರ ದೃಢ ಅನಿಸಿಕೆ. ಇವರ ದೃಷ್ಟಿಯಲ್ಲಿಮಾನವರೆಲ್ಲರೂ ಸಮಾನರು ಜಾತಿ, ಕುಲ ಭೇದವಿಲ್ಲ, ಬಡವ-ಬಲ್ಲಿದ ಭೇದವಿಲ್ಲ ಎಲ್ಲರೂ ಇವರು ಟಂಕಿಸಿ ಪ್ರಯೋಗಿಸಿದ ಶ್ರೀಸಾಮಾನ್ಯ ಗುಂಪಿಗೆ ಸೇರಿದವರು. ಎಲ್ಲರೂ ಭಗವನ್ಮಾನ್ಯರು.

ತೀರ್ಥಹಳ್ಳಿ, ಮೈಸೂರಿನಲ್ಲಿ ವಿದ್ಯಾಭ್ಯಾಸ ಮಾಡಿ, 1929 ರಲ್ಲಿ ಎಂ.ಎ., ಪದವಿ ಪಡೆದು ಮಹಾರಾಜ ಕಾಲೇಜಿನಲ್ಲಿ ಉಪನ್ಯಾಸಕ ವೃತ್ತಿ ಆರಂಭಿಸಿದ ಶ್ರೀಯುತರು ವೃತ್ತಿ ಏಣಿಯನ್ನು ರಾಕೆಟ್ ವೇಗದಲ್ಲಿ ಏರಿ, ವಿಶ್ವವಿದ್ಯಾಲಯದ ಅತ್ಯುಚ್ಚ ಹುದ್ದೆಯಾದ ಕುಲಪತಿ ಗಾದಿಯನ್ನು 1959 ರಲ್ಲಿ ಅಲಂಕರಿಸಿದರು.

ಡಾ॥ ಸಿ.ಪಿ.ಕೆ. ಅವರು ಕುವೆಂಪು ಅವರ ಸಮಗ್ರ ಸಾಹಿತ್ಯ ಕೊಡುಗೆಗಳನ್ನು ಸ್ಪಷ್ಟವಾಗಿ ಕೆಲವೇ ಮಾತುಗಳಲ್ಲಿ ಹೀಗೆ ವಿವರಿಸಿದ್ದಾರೆ. 'ರಾಷ್ಟ್ರಕವಿ ಕುವೆಂಪು ಹೊಸಗನ್ನಡದ ಹಿರಿಯ ಕವಿಗಳಲೊಬ್ಬರು. ಕನ್ನಡ ಸಾಹಿತ್ಯವನ್ನು ವಿಶ್ವ ಸಾಹಿತ್ಯದ ವೇದಿಕೆಗೇರಿಸಿದ ಮಹಾನಾಯಕರಲ್ಲೊಬ್ಬರು. ಆಧುನಿಕ ಕನ್ನಡ ಕಾವ್ಯದ ಕಿರುವಾಹಿನಿ ಅವರ ಮೂಲಕ ಅದ್ಭುತ ಪ್ರವಾಹವಾಗಿ ಪರಿಣಮಿಸಿದೆ. ಒಂದು ಪಾದೇಶಿಕ ಸಾಹಿತ್ಯ ತನ್ನ ಸ್ಥಳೀಯತೆಯನ್ನು ಕೊಡವಿಕೊಂಡು ನಿಜವಾದ ವಿಶ್ವಸಾರ್ವತ್ರಿಕ ಚೊಕ್ಕ ಮುದ್ರೆಯನ್ನು ಸಂಪಾದಿಸಿಕೊಂಡಿದೆ. ಸಾಹಿತ್ಯದ ಸರ್ವಪ್ರಕಾರಗಳಲ್ಲೂ ಕುವೆಂಪು ಅವರಂತೆ ಏಕಪ್ರಕಾರವಾದ ಸಿದ್ಧಿ ಪಡೆದ ಲೇಖಕರು ಬಹುಮಂದಿಯಿಲ್ಲ. ಕಾವ್ಯಕ್ಷೇತ್ರದಲ್ಲಿ ಅವರು ಮಹಾಕಾವ್ಯ, ಖಂಡಕಾವ್ಯ ಕಥನಕಾವ್ಯ, ಭಾವಗೀತೆ ಎಲ್ಲವನ್ನೂ ಬರೆದಿದ್ದಾರೆ. ಶ್ರೀ ರಾಮಾಯಣ ದರ್ಶನಂ ಅವರ ಮಹಾಕಾವ್ಯ; ಆಧುನಿಕ ಯುಗಧರ್ಮವನ್ನು ಸಮಷ್ಟಿ ಪ್ರಜ್ಞೆಯನ್ನು ಪ್ರತಿಮಿಸುವ ಕೃತಿವಿಭೂತಿ. ಅವರ ಕಥನ ಗೀತೆಗಳು ಕಥನ ಕವನಗಳು ಎಂಬ ಕೃತಿಯಲ್ಲಿ ಸಂಕಲಿತವಾಗಿದೆ. ಚಿತ್ರಾಂಗದ ಮತ್ತು ಸಮುದ್ರ ಲಂಘನ ಅವರ ಖಂಡಕಾವ್ಯಗಳು. ಸುಮಾರು ಒಂದು ಸಹಸ್ರ ಸಂಖ್ಯೆಯಲ್ಲಿರುವ ಅವರ ಭಾವಗೀತೆಗಳು ಇಪ್ಪತ್ತೆರಡು ಸಂಕಲನಗಳಲ್ಲಿ ಶ್ರೇಣಿಗೊಂಡಿವೆ.'

ಮಹಾಛಂದಸ್ಸಿನ ವೇದಕೃತಿ ಶ್ರೀರಾಮಾಯಣ ದರ್ಶನಂ ಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1955) ಮತ್ತು ರಾಷ್ಟ್ರದ ಅತ್ಯುಚ್ಚ ಜ್ಞಾನಪೀಠ ಪ್ರಶಸ್ತಿ 1968) ಲಭಿಸಿವೆ.

'ಶ್ರೀರಾಮಾಯಣ ದರ್ಶನಂ' ಇದು ವಾಲ್ಮೀಕಿರಾಮಾಯಣದ ಹಾದಿಯಲ್ಲಿ ನಡೆದು ಬಂದ ಒಂದು ಉದ್ಗ್ರಂಥ. ಕಾವ್ಯದಲ್ಲಿ ಇವರು ತಮಗೆ ಸೂಕ್ತವೆನಿಸಿದ ಹಲವು ಬದಲಾವಣೆಗಳನ್ನು ಮಾಡಿಕೊಂಡು ಇದಕ್ಕೆ ಒಂದು ನವ್ಯ ದೃಷ್ಟಿಯನ್ನು ನೀಡಿರುತ್ತಾರೆ. ಮಂಥರ, ಊರ್ಮಿಳಾ ರಾವಣರ ಪಾತ್ರ ಸೃಷ್ಟಿಯಲ್ಲಿ ಹೊಸತನವನ್ನು ಕಾಣುತ್ತೇವೆ. ಅವರ ಮನಸ್ಸಿನ ತುಮಲ ಉತ್ಕಟ ಆಕಾಂಕ್ಷೆಯ ನೈಜ ಅರಿವು ನಮ್ಮ ಮನಸ್ಸಿಗೆ ಆದಾಗ ಆ ವ್ಯಕ್ತಿತ್ವದ

ಮೇಲೆ ಹೆಮ್ಮೆ ಮೂಡುತ್ತದೆ. ಅವರಲ್ಲುಳಿದಿರುವ ಮಾನವೀಯ ದುರ್ಬಲತೆಯ ಬಗ್ಗೆ ಅನುಕಂಪ ಮೂಡುತ್ತದೆ. ನಾವು ವಾಲ್ಮೀಕಿ ರಾಮಾಯಣದಲ್ಲಿ ಕಾಣುವ ಮಂಥರೆಗೂ, ಕುವೆಂಪು ಅವರ ಸೃಷ್ಟಿ ಮಂಥರೆಗೂ ಅಜಗಜಾಂತರವಿದೆ. ಇಲ್ಲೂ ಮಂಥರೆಗೂ ಆದರೆ ವ್ಯಕ್ತಿತ್ವ ಹಿರಿಮೆ ಇಲ್ಲಿಯ ರಾವಣ ಶೂರ, ಧೀರ, ಅಭಿಮಾನಿ, ಮಹತ್ವಾಕಾಂಕ್ಷೆ ಉಳ್ಳವನು ಹಾಗೂ ಸಂಯಮಿ, ಪತಿವ್ರತೆ ಯಾರಾದರೂ ಸಿಕ್ಕಿದರೆ ಅವರ ಕಾಲಿಗೆರಗುವೆನೆಂದು ಹಂಬಲಿಸುವ ಆದರ್ಶವಾದಿ ಪ್ರಪಂಚದಲ್ಲೆಲ್ಲಾ ಈ ಬಗ್ಗೆ ಪರೀಕ್ಷೆ ನಡೆಸಿದಾಗ್ಯೂ ಯಾರೂ ಇಂತಹ ಆದರ್ಶನಾರಿ ಸಿಕ್ಕದಿದ್ದುದರಿಂದ ಈಗ ಸೀತೆಯ ಪರೀಕ್ಷೆ ನಡೆಸಹೊರಟಿದ್ದಾನೆ. ಈ ಹೊಸ ದೃಷ್ಟಿಯಲ್ಲಿ 'ವಿಮಲಸೂರಿ'ಯ ರಾವಣನ ವ್ಯಕ್ತಿತ್ವದ ಛಾಯೆಯನ್ನು ಕಾಣಬಹುದಾಗಿದೆ. ರಾವಣ ಸತ್ತಾಗ ದೂರಾತ್ಮನೊಬ್ಬ ಸತ್ತನೆಂದು ಸಂತೋಷವಾಗುವುದಿಲ್ಲ. ರಾವಣನ ವ್ಯಕ್ತಿತ್ವದ ಬಗ್ಗೆ ಸಹಾನುಭೂತಿ ಉಕ್ಕಿ ಹರಿಯುತ್ತದೆ.

ಪ್ರಥಮ ಜ್ಞಾನಪೀಠ ಪ್ರಶಸ್ತಿ; ಪ್ರಥಮ ಪಂಪ ಪ್ರಶಸ್ತಿ ಕರ್ನಾಟಕದ ಅತ್ಯುನ್ನತ ಪ್ರಶಸ್ತಿ 'ಕರ್ನಾಟಕ ರತ್ನ' ಕನ್ನಡ ಸಾಹಿತ್ಯ ಪರಿಷತ್ತಿನ ಫೆಲೋಶಿಪ್ ಹೀಗೆ ಪ್ರಥಮ ಪ್ರಶಸ್ತಿ / ಪುರಸ್ಕಾರಗಳ ಸರಮಾಲೆಯನ್ನೇ ಧರಿಸಿದ ಪ್ರಥಮ ಕನ್ನಡ ಕವಿ ಎಂಬ ಹೆಗ್ಗಳಿಕೆಗೆ ಇವರು ಪಾತ್ರರಾಗಿದ್ದಾರೆ.

ಇವರಿಗೆ ಲಭಿಸಿರುವ ಇತರ ಪ್ರಶಸ್ತಿ / ಪುರಸ್ಕಾರಗಳು : ಭಾರತ ಸರ್ಕಾರದ ಪದ್ಮಭೂಷಣ ಪ್ರಶಸ್ತಿ (1958); ಕರ್ನಾಟಕ ಸರ್ಕಾರದ ರಾಷ್ಟ್ರಕವಿ ಬಿರುದು (1964); ಪದ್ಮವಿಭೂಷಣ ಪ್ರಶಸ್ತಿ (1991). ಮೈಸೂರು (1956); ಕರ್ನಾಟಕ (1960); ಬೆಂಗಳೂರು (1969) ವಿಶ್ವವಿದ್ಯಾನಿಲಯಗಳಿಂದ ಗೌರವ ಡಿ.ಲಿಟ್., ಪದವಿಗಳು.

1957 ರಲ್ಲಿ ಧಾರವಾಡದಲ್ಲಿ ನಡೆದ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಗಿರಿ ಅಲಂಕರಿಸಿದ ಗೌರವಕ್ಕೆ ಪಾತ್ರರಾಗಿದ್ದಾರೆ.

ಅಧ್ಯಕ್ಷ ಭಾಷಣದ ಈ ಕೆಲ ಮಾತುಗಳು ಸಾರ್ವಜನಿಕ ಸತ್ಯವನ್ನು ಸಾರುತ್ತಿವೆ.

"ಭಾರತ ರಾಷ್ಟ್ರವನ್ನು ನಮ್ಮ ರಾಜ್ಯಾಂಗ ಸಮನ್ವಯ ರಾಷ್ಟ್ರವೆಂದು ಘೋಷಿಸಿದೆ. 'ಸೆಕ್ಯೂಲರ್' ಎಂದರೆ ಧರ್ಮರಹಿತ, ಮತರಹಿತ ಚಾರ್ವಾಕ ಅಥವಾ ನಾಸ್ತಿಕ ಎಂದೇನೂ ಅರ್ಥವಲ್ಲ. ಇಲ್ಲಿ ಎಲ್ಲಾ ಧರ್ಮಗಳೂ ಎಲ್ಲ ದೃಷ್ಟಿಗಳೂ, ಎಲ್ಲ ಆಚಾರ ಆರಾಧನೆಗಳೂ ಪರಸ್ಪರ ಗೌರವದಿಂದ ಪರಸ್ಪರ ವಿಶ್ವಾಸದಿಂದ ದಾರಿಗಳು ಬೇರೆ ಬೇರೆ ಯಾದರೂ ಸರ್ವರಿಗೂ ಏಕೈಕವಾದ ಗುರಿಯಾಗಿರುವ ಭಗವತ್ ತತ್ವದ ಕಡೆಗೆ ಸಾಗಬಹುದು.....'

ಈ ಪ್ರಕೃತಿ ಕವಿ ರಚಿಸಿರುವ ಕೃತಿ ಮಾಲೆಯಲ್ಲಿ ನಿಸರ್ಗದತ್ತ ಮಲೆನಾಡಿನ ಸುಗಂಧಭರಿತ ಸಿರಿಸುಂದರ ಚೆಲವು ಪುಷ್ಪಗಳ ಜೊತೆಗೆ ತೋಟದೊಳಗಿನ ಕುಂಡದಲ್ಲಿನ ನವಜಾತ ವೈವಿಧ್ಯ ರಂಗು ರಂಗಿನ ಪುಷ್ಪ-ಕಾಶಿಯೂ ಸೇರಿ ಪಾರಿಜಾತ ಪುಷ್ಪಗಳಿಂದ ಅಲಂಕೃತಗೊಂಡ ಕುಚ್ಚುಗಳು ಸುರಮ್ಯ ಸೌಂದರ್ಯದ ಸಾಕಾರ ರೂಪವಾಗಿದೆ. ಈ ಹೂಮಾಲೆಯಲ್ಲಿ ಮೊದಲ ಕುಚ್ಚಾಗಿ

ಮಹಾಕಾವ್ಯವಾದ ಶ್ರೀ ರಾಮಾಯಣದರ್ಶನಂ ಇದ್ದರೆ ಎರಡನೆ ಭಾವಗೀತೆಗಳ ಕುಚ್ಚಿನಲ್ಲಿ ಕೊಳಲು, ನವಿಲು; ಪಕ್ಷಿಕಾಶಿ; ಅಗ್ನಿಹಂಸ; ಕೋಗಿಲೆ; ಮತ್ತು ಸೋವಿಯಟ್ ರಷ್ಯಾ; ಪ್ರೇಮಕಾಶ್ಮೀರ, ಕಲಾಸುಂದರಿ;ಜೇನಾಗುವ; ಷೋಡಶಿ; ಕೃತ್ತಿಗೆ, ಇಕ್ಷು ಗಂಗೋತ್ರಿ ಮೊದಲಾದ ಸುರಮ್ಯ ಹೂಗಳು ಕಂಗೊಳಿಸುತ್ತಿವೆ. ಈ ಹೂಮಾಲೆ ಚಿತ್ರಾಂಗದ; ಸಮುದ್ರ ಲಂಘನ ಮುಂತಾದ ಖಂಡ ಕಾವ್ಯಗಳನ್ನು ಪೋಣಿಸಿಕೊಂಡು ನಾಟಕದ ಗುಚ್ಚ ಸೇರುತ್ತವೆ. ಇದರಲ್ಲಿ ಬೆರಳ್ಗೆ ಕೊರಳ್, ಬಿರುಗಾಳಿ, ಯಮನಸೋಲು; ವಾಲ್ಮೀಕಿಯ ಭಾಗ್ಯ; ಶ್ಮಶಾನ ಕುರುಕ್ಷೇತ್ರ, ಮಹಾರಾತ್ರಿ; ಜಲಗಾರ; ಶೂದ್ರ ತಪಸ್ವಿ; ಚಂದ್ರಹಾಸ ಮೊದಲಾದ ಮಲ್ಲಿಗೆ, ಜಾಜಿ, ಶಾವಂತಿಕ, ಸಂಪಿಗೆ ಹೂಗಳಿವೆ. ಬಾಲಸಾಹಿತ್ಯದ ದುಂಡುಮಲ್ಲಿಗೆ ಹೂಗಳು ಮರಿವಿಜ್ಞಾನಿ ಮೇಘಪುರ, ನನ್ನ ಮನೆ, ನನ್ನ ಗೋಪಾಲ ಮೇಡಣ್ಣನ ತಮ್ಮ ಮಕ್ಕಳ ನಾಟಕಗಳು. ವಿಭೂತಿ ಪೂಜೆ; ಕಾವ್ಯವಿಹಾರ, ತಪೋನಂದನ; ದ್ರೌಪದಿಯ ಶ್ರೀಮುಡಿ; ರಸೋವೈಸಃ ಇತ್ಯಾದಿ ವಿಮರ್ಶಾ ಗುಚ್ಚ ಸೇರುತ್ತದೆ. ಮುಂದಿನದು ಎರಡೇ ಕೆಂಪುಗುಲಾಬಿಯ ಕಾದಂಬರಿ ಗುಚ್ಚ. ಇದರಲ್ಲಿ ಕಾನೂರು ಸುಬ್ಬಮ್ಮ ಹೆಗ್ಗಡತಿ; 'ಮಲೆಗಳಲ್ಲಿ ಮದುಮಗಳು'ಗಳಿವೆ, ಮುಂದವರಿದ ಹೂ ದಂಡೆಯಲ್ಲಿರುವ ಸೂಜಿ ಮಲ್ಲಿಗೆ, ಮರುಗ, ಪಚ್ಚತೆನೆಗಳು ಮಲ್ಲೆ ಮೊಗ್ಗು, ಭಾಷಣಗಳು, ಪ್ರಬಂಧಗಳು, ಕಥೆಗಳು, ಲೇಖನಗಳು, ಜೀವನಚಿತ್ರಗಳನ್ನು ಪ್ರತಿನಿಧಿಸುತ್ತವೆ. (ಮನುಜಮತ-ವಿಶ್ವಪಥ, ಸಾಹಿತ್ಯ ಪ್ರಚಾರ) ಷಷ್ಠಿನಮನ; ಸ್ವಾಮಿವಿವೇಕಾನಂದ; ಶ್ರೀರಾಮಕೃಷ್ಣ ಪರಮಹಂಸ ಇತ್ಯಾದಿ) ಇಂತಹ ವಿನೂತನ ಅನರ್ಘ್ಯ ದೇವಮಾಲೆಯ ನಿರ್ಮಾತ ಡಾ|| ಕುವೆಂಪು.

ಕನ್ನಡ ಎನೆ ಕುಣದಾಡುವುದೆನ್ನದೆ

ಕನ್ನಡ ಎನೆ ಕಿವಿನಿಮಿರುವುದು.......

ಎಂದು ಕನ್ನಡಾಂಬೆಯ ಜಯಭೇರಿ ಬಾರಿಸಿದ ಕನ್ನಡ ಕಲಿ ಕುವೆಂಪು ಸದಾ ಕನ್ನಡ ಜನಮನದಲ್ಲಿ ನೆಲೆಸಿದ್ದಾರೆ.

ಇವರು ದಿನಾಂಕ 10-11-1994 ರಂದು ನಿಧನರಾದಾಗ ಕನ್ನಡ ಕುಲಕೋಟಿ ದುಃಖಾಬ್ಧಿಯಲ್ಲಿ ಮುಳುಗಿತು.

ಓ ನನ್ನ ಚೇತನ, ಆಗುನೀ ಅನಿಕೇತನ! ರೂಪ ರೂಪಗಳನು ದಾಟಿ ನಾಮ ಕೋಟಿಗಳನ್ನು ಮೀಟಿ ಎದೆಯ ಬಿರಿಯೆ ಭಾವದೀಟಿ, ಓ ನನ್ನ ಚೇತನ, ಆಗು ನೀ ಅನಿಕೇತನ.....ಎಂಬ ಅವರ ವಿಶ್ವಮಾನವ ಗೀತೆ ಸದಾ ಅವರ ಸವಿನೆನಪನ್ನು ಹಸಿರಾಗಿರಿಸುತ್ತದೆ.

ಈ ದಿವ್ಯ ಚೇತನ ಸದಾ ಬೆಳಗುವ ನಂದಾದೀಪ.

* * *

# ಶತಮಾನೋತ್ಸವ ಸ್ಮರಣೆ

## *ಕನ್ನಡ ನವೋದಯಲೋಕದ ಪಂಚಮರತ್ನ-ಡಾ|| ಪು.ತಿ.ನ.*



ಪ್ರೊ|| ನಾ. ಗೀತಾಚಾರ್ಯ

-೧-

ಕನ್ನಡ ಸಾಹಿತ್ಯದ ನವೋದಯ ಲೋಕದಲ್ಲಿ ಏಕಕಾಲದಲ್ಲಿ ಐವರು ಶ್ರೇಷ್ಠ ಕವಿಗಳು ಕಂಡುಬಂದಿದ್ದಾರೆ. ಒಬ್ಬೊಬ್ಬರು ಒಂದೊಂದು ಶಿಖರ. ಒಬ್ಬರಿಗೊಬ್ಬರು ಪೈಪೋಟಿಯಲ್ಲ, ಪ್ರಭಾವಿಗಳಲ್ಲ. ಪ್ರತಿಸ್ಪರ್ಧಿಗಳಲ್ಲ. ಅವರಿಗೆ ಅವರೇ ಸರಿಸಾಟಿ. ಯಾರನ್ನೂ ಇನ್ನೊಬ್ಬರೊಂದಿಗೆ ಹೋಲಿಸಿ ಅವರು ಹೆಚ್ಚು, ಇವರು ಕಡಿಮೆ ಎನ್ನಲಾಗುವುದಿಲ್ಲ. ಎಲ್ಲರೂ ಹೆಚ್ಚೇ. ಒಬ್ಬೊಬ್ಬರೂ ಒಂದೊಂದು ದೃಷ್ಟಿಯಿಂದ ಮೇರು ಶಿಖರಗಳೇ. ಈ ಐದು ಜನ ಕರ್ನಾಟಕದ ಬೇರೆ ಬೇರೆ ಭಾಗಗಳಿಂದ ಕಾಣಿಸಿಕೊಂಡು ಇಡೀ ಕರ್ನಾಟಕದ ಸಾರಸ್ವತ ಲೋಕವನ್ನೇ ಶ್ರೀಮಂತಗೊಳಿಸಿದ್ದಾರೆ. ಭವ್ಯ ದೇವಾಲಯದ ಎತ್ತರದ ಗೋಪುರದಲ್ಲಿರುವ ಪಂಚ ಕಳಸಗಳಂತೆ, ಸುಂದರ ಬೆಂಡೋಲೆಯಲ್ಲಿ ಪೋಣಿಸಿದ ಪಂಚರತ್ನಗಳಂತೆ ಐವರೂ ಬೇರೆ ಬೇರೆಯಾಗಿ, ಸ್ವತಂತ್ರವಾಗಿ, ಪರಸ್ಪರ ಸಮಾನರಾಗಿ, ಸಮ ಜೋಡಿಯಾಗಿ ಕನ್ನಡ ಸಾಹಿತ್ಯಕ್ಕೆ ಶೋಭೆಯನ್ನು ತಂದುಕೊಟ್ಟಿದ್ದಾರೆ.

ಕನ್ನಡ ನವೋದಯ ಸಾಹಿತ್ಯದ ಈ ಪಂಚ ಕಳಸಗಳೆಂದರೆ ಕುವೆಂಪು, ಬೇಂದ್ರೆ, ಕಾರಂತ, ಮಾಸ್ತಿ ಮತ್ತು ಪು.ತಿ.ನ. ಈ ಐವರೂ ತಮ್ಮದೇ ಆದ ವಿಶಿಷ್ಟ ವ್ಯಾಸಂಗಗಳಿಂದ ಬೆಳೆದವರು. ಕುವೆಂಪು ಪ್ರಕೃತಿಯ ನೆಲೆವೀಡಾದ ಮಲೆನಾಡಿನಿಂದ, ಬೇಂದ್ರೆ ಉತ್ತರ ಕರ್ನಾಟಕದ ಗಂಡು ನೆಲದಿಂದ, ಕಾರಂತ ಕರಾವಳಿತೀರದ ಕಣಿವೆಗಳಿಂದ, ಮಾಸ್ತಿ ಕೋಲಾರ-ಬೆಂಗಳೂರು ಪ್ರದೇಶದ ಬಯಲಿನಿಂದ. ಪು.ತಿ.ನ. ಮೇಲುಕೋಟೆಯ ಧಾರ್ಮಿಕ ಪರಿಸರದಿಂದ ಆಯಾ ಲಕ್ಷಣಗಳೊಂದಿಗೆ ಹೊರ ಹೊಮ್ಮುವ ಮೂಲಕ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಈ ಪ್ರಾದೇಶಿಕ ವೈಶಿಷ್ಟ್ಯಗಳಿಂದಲೇ ಇವರ ಸಾಹಿತ್ಯವೂ ವಿಶಿಷ್ಟವಾಗಿದ್ದು; ಒಬ್ಬರು ಇನ್ನೊಬ್ಬರಿಂದ ಭಿನ್ನರಾಗಿ ನಿಲ್ಲುವಂತಾಗಿದೆ. ಈ ಭಿನ್ನತೆಯ ಮೂಲಕವೇ ಪರಸ್ಪರ ಪ್ರಭಾವಕ್ಕೊಳಗಾಗದೆ. ತಮ್ಮ ತಮ್ಮ 'ತನ'ಗಳ ಮೂಲಕ ಸಮಾನ ಶ್ರೇಷ್ಠತೆಯನ್ನು ಮೆರೆಯುವಂತಾಗಿದೆ.

ಜಾಗತಿಕ ಇತಿಹಾಸದಲ್ಲೇ ಇದೊಂದು ವಿಶಿಷ್ಟವಾದ ಸಂದರ್ಭ. ಏಕಕಾಲದಲ್ಲಿ ಹೀಗೆ ಐದಾರು ಮಂದಿ ಸಾಹಿತಿಗಳು ಮೇರು ಪರ್ವತಗಳಂತೆ ಜೊತೆ ಜೊತೆಯಾಗಿ ನಿಂತು ಶೋಭಿಸಿರುವ ಸಂದರ್ಭ; ಜಗತ್ತಿನ ಇತಿಹಾಸದಲ್ಲಿ ಯಾವ ಭಾಷೆಯ ಸಾಹಿತ್ಯದಲ್ಲೂ ಕಂಡುಬಂದಿಲ್ಲ. ಒಂದೊಂದು ಕಾಲದಲ್ಲಿ ಒಬ್ಬೊಬ್ಬ ಕವಿಗಳು ಮಾತ್ರ ಮೇರು ಪರ್ವತಗಳಾಗಿ ಬೆಳೆದು ನಿಂತಿರುವುದನ್ನು ನೋಡುತ್ತೇವೆ. ಅವರ ನೆರಳಿನಲ್ಲಿ ಅನೇಕ ಮರಿ ಪರ್ವತಗಳಿರಬಹುದು. ಆದರೆ ಮೇರು ಪರ್ವತಗಳು ಒಬ್ಬೊಬ್ಬರೇ. ಸಂಸ್ಕೃತದಲ್ಲಿ ಕಾಳಿದಾಸ

(ಕ್ರಿ.ಪೂ. 56), ಭಾಸ (ಕ್ರಿ.ಪೂ. 4ನೇ ಶ.), ಭಾರವಿ (ಕ್ರಿ.ಪೂ. 7ನೇ ಶ.), ಇಂಗ್ಲಿಷ್ ಸಾಹಿತ್ಯದಲ್ಲಿ ಷೇಕ್ಸ್‌ಫಿಯರ್(ಕ್ರಿ.ಶ. 1564-1616), ಡಾಂಟೆ (14ನೇ ಶ.), ಮಿಲ್ಟನ್(ಕ್ರಿ.ಶ. 1608-1674), ವರ್ಡ್ಸ್‌ವರ್ತ(ಕ್ರಿ.ಶ. 1770-1810) ಇವರುಗಳೆಲ್ಲ ಅವರವರ ಕಾಲದಲ್ಲಿ ಅವರು ಒಬ್ಬೊಬ್ಬರೇ ಮೆರೆದವರು. ಅವರೊಂದಿಗೆ ಅವರಷ್ಟೇ ಎತ್ತರಕ್ಕೆ ಬೆಳೆದ ಇನ್ನೊಬ್ಬರನ್ನು ಆ ಕಾಲದಲ್ಲಿ ಕಾಣುವುದಿಲ್ಲ. ಆದರೆ ಕನ್ನಡ ಸಂದರ್ಭ ಇದಕ್ಕೆ. ಅಪವಾದ. ಆಧುನಿಕ ಕಾಲದ ಈ ಸಾಮೂಹಿಕ ಶ್ರೇಷ್ಠತೆಗೆ ಪೂರಕವಾಗಿ ಪ್ರಾಚೀನ ಕಾಲದಲ್ಲೂ ನಿದರ್ಶನಗಳಿವೆ. ಹತ್ತನೇ ಶತಮಾನದಲ್ಲಿ ಪಂಪ-ರನ್ನ-ಪೊನ್ನರು, 12ನೇ ಶತಮಾನದಲ್ಲಿ ಅಲ್ಲಮ-ಬಸವ-ಅಕ್ಕ-ಸಿದ್ಧರಾಮರು, 16ನೇ ಶತಮಾನದಲ್ಲಿ ಕನಕ-ಪುರಂದರ-ಕುಮಾರವ್ಯಾಸರು ಇವರೆಲ್ಲ ಒಟ್ಟೊಟ್ಟಿಗೆ ಕಂಡುಬರುತ್ತಾರೆ. 19ನೇ ಶತಮಾನದಲ್ಲೂ ಹತ್ತಾರು ಜನ ಕವಿ-ಸಾಹಿತಿಗಳ ಸಮೂಹವೇ ಇದೆಯಾದರೂ ಅವರುಗಳ ಸಾಹಿತ್ಯದ ಬಗ್ಗೆ ಇನ್ನೂ ಸಂಪೂರ್ಣವಾಗಿ ಮೌಲ್ಯಮಾಪನವಾಗಿಲ್ಲ. ಪರಿಚಿತರಾಗಿರುವ ಒಬ್ಬಿಬ್ಬರನ್ನು ಹೆಸರಿಸುತ್ತಿದ್ದೇವೆಯೇ ವಿನಾ ಎಲ್ಲರ ಸಾಹಿತ್ಯವನ್ನೂ ಒರೆಗೆ ಹಚ್ಚಿ ಶ್ರೇಷ್ಠರನ್ನು ಗುರುತಿಸಲಾಗಿಲ್ಲ. ಈ ಕಾಲದ ಸಾಹಿತ್ಯವನ್ನು ಸಮಗ್ರವಾದ ವಿಶ್ಲೇಷಣೆಗೆ ಒಳಪಡಿಸಿದರೆ ಇಲ್ಲಿಯೂ ಹಲವು ಶ್ರೇಷ್ಠ ಸಾಹಿತಿಗಳ ಸಾಮೂಹಿಕ ಪ್ರತಿಭೆ ಪ್ರಕಟವಾಗುವುದರಲ್ಲಿ ಸಂಶಯವಿಲ್ಲ. 20ನೇ ಶತಮಾನದ ಈ ಪಂಚರತ್ನಗಳ ನಂತರದ ಪೀಳಿಗೆಯಲ್ಲಿಯೂ ಈ ಪರಂಪರೆ ಮುಂದುವರಿದಿರುವುದನ್ನು ಗಮನಿಸಬಹುದು.

ಆಧುನಿಕ ಸಾಹಿತ್ಯದ ಈ ಪಂಚರತ್ನಗಳಲ್ಲಿ ನಾಲ್ವರಿಗೆ ಜ್ಞಾನಪೀಠ ಪ್ರಶಸ್ತಿ ಲಭಿಸಿದೆ. ಪಂಚಮ ರತ್ನವಾದ ಪು.ತಿ.ನ. ಅವರಿಗೆ ಈ ಪ್ರಶಸ್ತಿ ಬರಲಿಲ್ಲ. ಹಾಗೆಂದು ಈ ಪ್ರಶಸ್ತಿಯ ದೃಷ್ಟಿಯಿಂದ ಉಳಿದ ನಾಲ್ವರಿಗಿಂತ ಪು.ತಿ.ನ. ಕಡಿಮೆಯೆಂದು ಹೇಳಲಾಗುವುದಿಲ್ಲ. ಇದರಿಂದ ಪು.ತಿ.ನ.ರ ಸಾಹಿತ್ಯದ ಶ್ರೇಷ್ಠತೆಗೆ ಯಾವ ಊನವೂ ಆಗುವುದಿಲ್ಲ. ಅಂತಹ ಶ್ರೇಷ್ಠತೆಯ ಶಿಖರದಲ್ಲಿ ಇರುವ ಪು.ತಿ.ನ. ಕನ್ನಡ ನವೋದಯ ಸಾಹಿತ್ಯದಲ್ಲಿ ಚಿರಸ್ಥಾಯಿಯಾಗಿದ್ದಾರೆ. ಐದು ರತ್ನಗಳನ್ನು ಕೂಡಿಸಿ ರಚಿಸಿರುವ ಸುಂದರವಾದ ಬೆಂಡೋಲೆಯಂತೆ ಈ ಐದೂ ಜನ ಸಾಹಿತ್ಯಲೋಕದಲ್ಲಿ ಮಿನುಗುತ್ತಿದ್ದಾರೆ. ಇದರಲ್ಲಿ ಒಂದು ರತ್ನ ಊನವಾದರೂ ಒಟ್ಟು ಓಲೆಯ ಅಂದವೇ ಕೆಡುವಂತೆ ಇವರಲ್ಲಿ ಒಬ್ಬರನ್ನು ಬಿಟ್ಟರೂ ನವೋದಯ ಕಾಲದ ಸಾಹಿತ್ಯದ ಚರ್ಚೆ ಅಪೂರ್ಣವಾಗುತ್ತದೆ. ಈ ರತ್ನದೋಲೆಯಲ್ಲಿ ಪಂಚಮ ರತ್ನವಾಗಿರುವ ಪು.ತಿ.ನ. ಅವರ ಶತಮಾನೋತ್ಸವವು ಪ್ರಥಮ ರತ್ನವಾಗಿರುವ ಕುವೆಂಪು ಅವರ ಶತಮಾನೋತ್ಸವದೊಂದಿಗೆ ಬಂದಿರುವುದು, ವಿಶೇಷ ಸಂದರ್ಭವೆನಿಸಿದೆ. ಉಳಿದ ತ್ರಿರತ್ನಗಳ ಶತಮಾನೋತ್ಸವಗಳು ಈಗಾಗಲೇ ಆಗಿಹೋಗಿವೆ. ಈ ಸಂದರ್ಭದಲ್ಲಿ ಪಂಚಮ ರತ್ನದ ಸಾಹಿತ್ಯ ಸಾಧನೆಯತ್ತ ಒಂದು ಇಣುಕು ನೋಟ.

-೨-

ಪು.ತಿ.ನ. ಎಂದರೇ ಮೇಲುಕೋಟೆ. ಮೇಲುಕೋಟೆ ಎಂದರೇ 'ವೈರಮುಡಿ'. ಧಾರ್ಮಿಕ ಲೋಕದಲ್ಲಿ ವೈರಮುಡಿಯಿಂದ ಮೇಲುಕೋಟೆ ಚಿರಪರಿಚಿತವಾಗಿದ್ದರೆ, ಸಾಹಿತ್ಯ ಲೋಕಕ್ಕೆ ಪು.ತಿ.ನ. ರಿಂದ ವೈರಮುಡಿ ಚಿರಪರಿಚಿತವಾಗಿದೆ. ಪು.ತಿ.ನ. ಹುಟ್ಟಿಬಂದದ್ದು ಈ ಪವಿತ್ರ ಸ್ಥಳದಿಂದ, ಚಲುವರಾಯನ ಅರ್ಚನೆಯ ಸಂಬಂಧವಿರುವ ಮಡಿವಂತ ಕುಟುಂಬದ

ಪರಿಸರದಿಂದ, ಆ ಪ್ರಸಿದ್ಧ ಉತ್ಸವವಾದ ವೈರಮುಡಿಯ ಒಳ-ಹೊರಗುಗಳನ್ನೆಲ್ಲ ಬಲ್ಲ ಮೂಲ ನೆಲೆಯಿಂದ. ಈ ವೈರಮುಡಿಯನ್ನು ಧರಿಸಿಕೊಳ್ಳುವ ಯೋಗವಿರುವ ಚೆಲುವ ನಾರಾಯಣನ ದೇವಾಲಯದಲ್ಲಿ ನಡೆಯುವ ಪ್ರತಿಯೊಂದು ಚಟುವಟಿಕೆಗಳನ್ನು ಆಚರಿಸುವ-ಅನುಭವಿಸುವ-ಆಸ್ವಾದಿಸುವ ಪು.ತಿ.ನ. ಅದೆಲ್ಲವನ್ನೂ ಮೈಗೂಡಿಸಿಕೊಂಡು, ಆಧುನಿಕ-ವೈಚಾರಿಕ ಚಿಂತನೆಗಳೊಂದಿಗೆ ಮೇಳವಿಸಿಕೊಂಡು ಸಾಹಿತ್ಯ ಲೋಕದಲ್ಲಿ ಧೃವತಾರೆಯಾಗಿ ಬೆಳೆದು ವೈರಮುಡಿಯಂತೆಯೇ ಪ್ರಸಿದ್ಧರಾದವರು.

ತಂದೆ ಪುರೋಹಿತ ತಿರುನಾರಾಯಣ ಅಯ್ಯಂಗಾರ್ ಮತ್ತು ತಾಯಿ ರಾಮಮ್ಮನವರ ಸುಪುತ್ರರಾಗಿ 17-3-1905 ರಲ್ಲಿ ಸಾತ್ವಿಕ ಹೆಬ್ಬಾರ್ ಶ್ರೀವೈಷ್ಣವ ಕುಟುಂಬದಲ್ಲಿ ಹುಟ್ಟಿದ ನರಸಿಂಹಾಚಾರ್ಯರ ಬಾಲ್ಯ-ವಿದ್ಯಾಭ್ಯಾಸವೆಲ್ಲ ಹುಟ್ಟೂರಾದ ಮೇಲುಕೋಟೆಯಲ್ಲಿಯೇ ನಡೆದಿದೆ. ಬಾಲ್ಯದಿಂದಲೇ ದೇವಾಲಯದ ಮತ್ತು ಮನೆಯ ಧಾರ್ಮಿಕ ಚಟುವಟಿಕೆಗಳು, ಸಂಸ್ಕೃತ ಮತ್ತು ದ್ರಾವಿಡ ವೇದ ಮಂತ್ರಗಳ ಅನುಸಂಧಾನ, ಮಡಿವಂತಮತೀಯ ಆಚರಣೆಗಳು ಇವುಗಳನ್ನು ಪರಿಸರದ ಬಳಕೆಯಿಂದ ಸಹಜವಾಗಿ ಮೈಗೂಡಿಸಿಕೊಂಡಿದ್ದ ಕವಿ, ಮೇಲುಕೋಟೆಯ ದೇವಾಲಯದ ಆವರಣದಲ್ಲೇ ಇರುವ ಸಂಸ್ಕೃತ ಪಾಠಶಾಲೆಯಲ್ಲಿ ಸಂಸ್ಕೃತವನ್ನು ಕಲಿಯುತ್ತ, ಸರ್ಕಾರಿ ಶಾಲೆಯಲ್ಲಿ ಪ್ರಾಥಮಿಕ ವಿದ್ಯಾಭ್ಯಾಸವನ್ನು ಮುಗಿಸಿದನಂತರ 1909 ರಿಂದ ಪ್ರೌಢ ವಿದ್ಯಾಭ್ಯಾಸವನ್ನು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಮುಂದುವರಿಸಿದ್ದಾರೆ. 1922 ರಲ್ಲಿ ಎಂಟ್ರೆನ್ಸ್ ಪರೀಕ್ಷೆಯನ್ನು ಮಾಡಿ 1926 ರಲ್ಲಿ ಬಿ.ಎ. ಪದವಿಯನ್ನು ಪಡೆದಿರುವ ಪು.ತಿ.ನ. ಮಹಾರಾಜ ಕಾಲೇಜಿನ ಸುವರ್ಣ ದಿನಗಳ ಸಂದರ್ಭದಲ್ಲಿ ಅಲ್ಲಿ ಬೆಳೆದವರು. ಕನ್ನಡ ನವೋದಯ ಸಾಹಿತ್ಯ ಚಿಗುರೊಡೆದದ್ದೇ ಅಲ್ಲಿ. ಆ ಅವಧಿಯಲ್ಲಿ ಬಿ.ಎಂ.ಶ್ರೀ., ಟಿ. ಎಸ್. ವೆಂಕಣ್ಣಯ್ಯ, ಎ.ಆರ್.ಕೃ. ಮುಂತಾದ ಸಾಹಿತ್ಯದ ಅಧ್ವರ್ಯರುಗಳ ಸಾರಥ್ಯದಲ್ಲಿ ನವೋದಯ ಕವಿ-ಲೇಖಕರು ತಂಡೋಪತಂಡವಾಗಿ ಅಲ್ಲಿಂದ ಹೊರಬಂದಿದ್ದಾರೆ. ಈ ಸಾರಥ್ಯಕ್ಕೆ ಮುಂದೆ ಸೇರಿಕೊಂಡ ತೀ.ನಂ.ಶ್ರೀಕಂಠಯ್ಯನವರೂ ಅಲ್ಲಿ ವಿದ್ಯಾರ್ಥಿಗಳಾಗಿದ್ದ ಕಾಲದಲ್ಲೇ ಪು.ತಿ.ನ. ಅವರ ಸಹಪಾಠಿಗಳಾಗಿದ್ದುದು, ಪು.ತಿ.ನ. ರವರು ಕವಿಗಳಾಗಿ ರೂಪಗೊಳ್ಳಲು ಪ್ರೇರಕವಾಗಿದೆ. ಇವರ ಇನ್ನಿಬ್ಬರು ಸಹಪಾಠಿ ನಂ. ಶಿವರಾಮಶಾಸ್ತ್ರೀ ಮತ್ತು ಕೂಡಲಿ ಚಿದಂಬರಂ. ಇವರೆಲ್ಲರ ಪ್ರೇರಣೆ ಪ್ರೋತ್ಸಾಹಗಳಿಂದ, ಮಹಾರಾಜ ಕಾಲೇಜಿನ ಸಾಹಿತ್ಯದ ವಾತಾವರಣದಿಂದ ಪು.ತಿ.ನ.ರ ಕವಿಹೃದಯ ಅರಳಿ ಕನ್ನಡ ಸಾಹಿತ್ಯದತ್ತ ಹೊರಳಿತು. ಇಲ್ಲದಿದ್ದರೆ ತತ್ವಶಾಸ್ತ್ರ, ವೇದಾಂತ ಮತ್ತು ಸಂಸ್ಕೃತ ವಿಷಯಗಳನ್ನು, ಫ್ರೆಂಚ್‌ಭಾಷೆಯನ್ನು ಬಿ.ಎ. ಯಲ್ಲಿ ಅಧ್ಯಯನ ಮಾಡಿದ್ದ ಪು.ತಿ.ನ. ಕನ್ನಡ ಕವಿಯಾಗಿ ಮೂಡಿಬರಲು ಸಾಧ್ಯವಿತ್ತೇ! ತತ್ವ-ವೇದಾಂತಗಳ ಜಿಜ್ಞಾಸಕಾರರಾಗಿಬಿಡುತ್ತಿದ್ದ ಪು.ತಿ.ನ. ಸರಸ ಮನೋಲ್ಲಾಸದ ರಸಮಯ ಕಾವ್ಯಸೃಷ್ಟಿಯ ಸೃಜನಶೀಲ ಲೇಖಕರಾಗಿ ಹೊರಹೊಮ್ಮಲು ಅವರ ಕವಿಹೃದಯಕ್ಕೆ ಸೂಕ್ತ ಕಾಲದಲ್ಲಿ ಸೂಕ್ತರಾದವರಿಂದ ಸೂಕ್ತ ಮಾರ್ಗದರ್ಶನ ದೊರಕಿದ್ದು ಮತ್ತು ಮಹಾರಾಜ ಕಾಲೇಜಿನ ಸುವರ್ಣ ದಿನಗಳ ಕನ್ನಡಪರ ವಾತಾವರಣವೇ ಕಾರಣವಾಗಿದೆಯೆಂದರೆ ಅತಿಶಯೋಕ್ತಿಯಲ್ಲ.

ವಿದ್ಯಾಭ್ಯಾಸ ಮುಗಿಯುವ ಮೊದಲೇ ಟಿ. ನರಸೀಪುರದ ಹೆಮ್ಮಿಗೆಯ ಶೇಷಮ್ಮನವರ ಕೈಹಿಡಿದು 1925 ರಲ್ಲೆ ಸಂಸಾರಿಗಳಾದ ಪು.ತಿ.ನ. ಬಿ.ಎ. ಪದವಿನಂತರ ಉದ್ಯೋಗದತ್ತ

ಗಮನ ಹರಿಸಿದ್ದಾರೆ. ಕೌಟುಂಬಿಕ ಕಾರಣದಿಂದ ಸಂಸಾರ ನಿರ್ವಹಣೆಗೆ ತರುಣದಲ್ಲೇ ಹೆಗಲುಕೊಟ್ಟಿದ್ದರಿಂದ ವಿದ್ಯಾಭ್ಯಾಸವನ್ನು ಬಿ.ಎ. ಪದವಿಗೆ ನಿಲ್ಲಿಸಿದ ಪು.ತಿ.ನ. ಅವರು 1927ರಲ್ಲೇ ಸೈನ್ಯ ಇಲಾಖೆಯಲ್ಲಿ ಗುಮಾಸ್ತರಾದರು. ಉದ್ಯೋಗದಲ್ಲಿ ನಿರತರಾದರೂ ಪು.ತಿ.ನ. ಅವರಲ್ಲಿ ಹುದುಗಿದ್ದ ಕವಿ ಹೊರಬರಲು ತವಕಿಸುತ್ತಲೇ ಇದ್ದ. ಕವನ, ಲಲಿತಪ್ರಬಂಧಗಳ ಬರವಣಿಗೆಯಲ್ಲಿ ತೊಡಗಿ, ಸಹಪಾಠಿ-ಸ್ನೇಹಿತರ, ವಿಶೇಷವಾಗಿ ತೀ.ನಂ.ಶ್ರೀಯವರ-ಸಹವಾಸ ಸಂಪರ್ಕದಲ್ಲಿದ್ದು, ಉತ್ತೇಜನ ಪಡೆಯುತ್ತಲೇ ಇದ್ದ ಪು.ತಿ.ನ. 1931 ರಲ್ಲಿ 'ರಾಮಾಚಾರಿಯ ನೆನಪು' ಪ್ರಬಂಧ ಸಂಕಲವನ್ನು 1933 ರಲ್ಲಿ 'ಹಣತೆ' ಕವನ ಸಂಕಲನವನ್ನು ಪ್ರಕಟಿಸುವ ಮೂಲಕ ಕವಿ-ಲೇಖಕರಾಗಿ ಪ್ರಕಟಗೊಂಡಿದ್ದಾರೆ. ಈ ಎರಡೂ ಕೃತಿಗಳಿಗೆ ದೊರೆತ ಸಹೃದಯ ಬೆಂಬಲದಿಂದ ಪು.ತಿ.ನ. ಲೇಖನಿ, ತಡೆಯಿಲ್ಲದೆ ಉತ್ಸಾಹದಿಂದ ಹರಿದಾಡುತ್ತ 2-3 ವರ್ಷಗಳಿಗೊಂದು ಪುಸ್ತಕದಂತೆ ಕಾವ್ಯ-ನಾಟಕ-ಪ್ರಬಂಧ-ವಿಮರ್ಶೆ-ಅನುವಾದಗಳನ್ನು ಕನ್ನಡಕ್ಕೆ ಕೊಟ್ಟಿದೆ. ಉದ್ಯೋಗದ ವೃತ್ತಿ ಬೇರೆಯಾದರೂ ಪ್ರವೃತ್ತಿಯಾಗಿ ಮೈಗೂಡಿಸಿಕೊಂಡಿದ್ದ ಸಾಹಿತ್ಯ ಕೃಷಿಯಲ್ಲೂ ಪು.ತಿ.ನ. ಹುಲುಸಾದ ಫಸಲನ್ನೇ ನೀಡಿದ್ದಾರೆ.

ಬ್ರಿಟಿಷ್ ಅಧಿಕಾರಿಗಳ ಕೈ ಕೆಳಗಿನ ಕೆಲಸವಾದ್ದರಿಂದ ದೇಶಭಕ್ತಿಯುನ್ನು ಚಳುವಳಿ-ಪ್ರತಿಭಟನೆಯ ಮೂಲಕ ಪ್ರಕಟಪಡಿಸಲಾಗದಿದ್ದರೂ ತಮ್ಮ ಕವಿತೆಗಳಲ್ಲಿ ಮುಕ್ತವಾಗಿ ವ್ಯಕ್ತಪಡಿಸುವ ಮೂಲಕ ತಮಗಿರುವ ರಾಷ್ಟ್ರ ಪ್ರೇಮವನ್ನು ಪು.ತಿ.ನ. ಪ್ರಕಟಪಡಿಸಿದ್ದಾರೆ. ತಮ್ಮ ಸಾತ್ವಿಕ-ಸೌಮ್ಯ-ಮತ್ತು ಶರಣಾಗತ ವ್ಯಕ್ತಿತ್ವದ ಮೂಲಕ ಕೆಲಸದಲ್ಲೂ ಕಾಲಕಾಲಕ್ಕೆ ಸೂಕ್ತ ಬಡ್ತಿಗಳನ್ನು ಪಡೆದು ಉನ್ನತ ಸ್ಥಾನಕ್ಕೇರುತ್ತಲೇ ಹೆಚ್ಚಿದ ಸಂಸಾರದ ಹೊರೆಯನ್ನು ಯಶಸ್ವಿಯಾಗಿ ನಿಭಾಯಿಸಿದ್ದಾರೆ. 1938 ರಲ್ಲಿ ಮ್ಯಾನೇಜರ್ ಆಗಿ, 1945 ರಲ್ಲಿ ಸೂಪರಿಂಡೆಂಟ್ ಆಗಿ ಸ್ವಾತಂತ್ರ್ಯಾನಂತರ ವಿಧಾನ ಸೌಧದಲ್ಲಿ ಅಧಿಕಾರಿಯಾಗಿ, 1952 ರಲ್ಲಿ ಶಾಸನಸಭೆಯ ಸಂಪಾದಕರಾಗಿ ಕಾರ್ಯನಿರ್ವಹಿಸಿ 1960 ರಲ್ಲಿ ನಿವೃತ್ತರಾಗುವ ಪು.ತಿ.ನ. ಆ ವೇಳೆಗೆ ಏಳು ಜನ ಹೆಣ್ಣು ಮಕ್ಕಳ ಮತ್ತು ಒಬ್ಬ ಗಂಡು ಮಗನ ವಿದ್ಯಾಭ್ಯಾಸವನ್ನೂ ಮುಗಿಸಿ ಅವರ ಕಾಲಮೇಲೆ ಅವರನ್ನು ನಿಲ್ಲಿಸಿದ ಸಾರ್ಥಕ ತಂದೆಯ ಕರ್ತವ್ಯವನ್ನೂ ಪೂರೈಸಿದ್ದಾರೆ. ನಿವೃತ್ತಿಯ ನಂತರವೂ 1965ರ ವರೆಗೆ ಮೈಸೂರು ವಿಶ್ವವಿದ್ಯಾನಿಲಯದ ವಿಶ್ವಕೋಶದಲ್ಲಿ ಮತ್ತು 1966 ರಿಂದ 1971ರ ವರೆಗೆ ಕನ್ನಡ ಇಂಗ್ಲೀಷ ನಿಘಂಟು ಕಚೇರಿಗಳಲ್ಲಿ ಸಂಪಾದಕರಾಗಿ ಸೇವೆ ಸಲ್ಲಿಸಿದ್ದಾರೆ. ಸಂಸಾರದ ಹೊರೆಯಾಗಲಿ, ಕೆಲಸದ ಭಾರವಾಗಲಿ ಕವಿ ಪು.ತಿ.ನ. ರನ್ನು ವಿಚಲಿತವಾಗಿಸಲಿಲ್ಲ. ಬದಲಿಗೆ ಅವೆರಡನ್ನೂ ಅವರ ಸಾಹಿತ್ಯದ ಸಂಸರ್ಗ ಸರಾಗಗೊಳಿಸಿದೆ, ಹಗುರವಾಗಿಸಿದೆ, ಮತ್ತು ಸಂಪನ್ನಗೊಳಿಸಿದೆ ಎಂದೇ ಹೇಳಬೇಕಾಗಿದೆ.

ಕಾವ್ಯ-ನಾಟಕ-ಪ್ರಬಂಧ ಪು.ತಿ.ನ. ಅವರ ಮುಖ್ಯವಾದ ಸಾಹಿತ್ಯ ಕ್ಷೇತ್ರಗಳು. ಪು.ತಿ.ನ. ಅವರ ಕಾವ್ಯಪ್ರತಿಭೆ ಹರಳುಗಟ್ಟಿರುವುದು ಕಾವ್ಯಲೋಕದಲ್ಲಿ, 'ಹಣತೆ' (1933) ಯಿಂದ 'ಹಣತೆಯ ಹಾಡು' (1988) ವರೆಗೆ ಹತ್ತು ಕವನ ಸಂಕಲನಗಳನ್ನೂ 'ಅಹಲ್ಯೆ' (1940) ಯಿಂದ 'ವಸಂತ ಚಂದನ'ದ ವರೆಗೆ 11 ಗೀತ-ನಾಟಕಗಳನ್ನು, 'ರಥಸಪ್ತಮಿ' 'ಈಚಲುಮರದ ಕೆಳಗೆ' (1949) ಮುಂತಾದ ಲಲಿತ ಪ್ರಬಂದ ಸಂಕಲನಗಳನ್ನೂ 'ಕಾವ್ಯ ಕುತೂಹಲ' ಮುಂತಾದ

2 ಕಾವ್ಯ ಚರ್ಚೆಯನ್ನು ಕುರಿತು ವಿಮರ್ಶೆ ಕೃತಿಗಳನ್ನೂ, 2 ಅನುವಾದ ಕೃತಿಗಳನ್ನೂ ರಚಿಸಿರುವ ಪುತಿನ ಅವರ ಪ್ರಧಾನವಾದ ಕೃತಿಯೆಂದರ 'ಶ್ರೀಹರಿಚರಿತೆ' (1988) ಮಹಾಕಾವ್ಯ.

ಪು.ತಿ.ನ. ಅವರ ಕೃತಿಗಳಲ್ಲಿ ದಾರ್ಶನಿಕತೆ ಹೆಚ್ಚಾಗಿ ಮೂಡಿಬಂದಿರುವುದರಿಂದ ವಿಮರ್ಶಕರಿಗೆ ಅವರ ಸಾಹಿತ್ಯ ಸವಾಲಿನದಾಗಿದೆ. ಸರಳವಾಗಿ ಮತ್ತು ಸುಲಭವಾಗಿ ಗ್ರಹಿಸಲು ಸಾಧ್ಯವಿಲ್ಲವೆಂಬಷ್ಟು ತಾತ್ವಿಕ ಚಿಂತನೆಗಳಿಂದ ಕೂಡಿ ಪ್ರೌಢವಾಗಿರುವುದು ಪು.ತಿ.ನ. ಅವರ ಸಾಹಿತ್ಯದ ವಿಶಿಷ್ಟ ಲಕ್ಷಣವಾಗಿದೆ. ಸಾಮಾನ್ಯವಾಗಿ ಎಲ್ಲ ವಿಮರ್ಶಕರೂ ಈ ಕ್ಲಿಷ್ಟತೆಯನ್ನು ಹೇಳುತ್ತಲೇ ಪು.ತಿ.ನ. ಅವರ ವ್ಯಕ್ತಿತ್ವವನ್ನು ಗುರುತಿಸಲು ಪ್ರಯತ್ನಿಸಿರುವುದನ್ನು ಕಾಣಬಹುದಾಗಿದೆ. ಪು.ತಿ.ನ. ಅವರಿಗೂ ತಾವು ಕಲ್ಪಿಸಿರುವ ಆ ಒಳ ಧ್ವನಿಯನ್ನು ಓದುಗರು ಗುರುತಿಸಲಾಗುತ್ತಿಲ್ಲವೆಂಬ ನೋವೂ ಇದ್ದುದನ್ನು ಅವರ ಅನೇಕ ಮಾತುಗಳಲ್ಲಿ ನೋಡಬಹುದಾಗಿದೆ. ಸಾಹಿತಿಗಳೊಂದಿಗಿನ ಚರ್ಚೆಯ ಸಂದರ್ಭಗಳಲ್ಲಿ ಅದನ್ನು ತಾವೇ ಆರೋಪಿಸಿಕೊಂಡು ತಾವೇ ಸರಳವಾಗಿ ಹೇಳುವಲ್ಲಿ ಸೋತಿದ್ದೇವೆಂದು ಹೇಳುವ ಮಾತುಗಳಲ್ಲಿ ಗುರುತಿಸಬಹುದಾಗಿದೆ. ಪು.ತಿ.ನ. ಅವರ ಕಾವ್ಯದಲ್ಲಿ ದಟ್ಟವಾಗಿ ಕಂಡುಬರುವ ಈ ದಾರ್ಶನಕತೆಗೆ ಎರಡು ಹಿನ್ನೆಲೆಗಳನ್ನು ಗುರುತಿಸಬಹುದು. ಒಂದು ಅವರು ವೇದಾಂತ ಮತ್ತು ತತ್ವಜ್ಞಾನದ ವಿದ್ಯಾರ್ಥಿಗಳಾಗಿರುವುದು. ಇನ್ನೊಂದು ಅವರ ಮತೀಯ ತತ್ವದ ಜಿಜ್ಞಾಸೆ. ಪು.ತಿ.ನ. ಪ್ರತಿಪಾದಿಸುವ ವಿಶಿಷ್ಟಾದ್ವೈತ ತತ್ವದಲ್ಲಿಯೇ ಅಂತಹದ್ದೊಂದು ದಾರ್ಶನಿಕತೆ ಕೆಲಸ ಮಾಡುತ್ತಿರುವುದನ್ನು ಅವರ ಸಾಹಿತ್ಯವನ್ನು ವಿಮರ್ಶೆ ಮಾಡುವವರೆಲ್ಲ ಗಮನಿಸಲೇಬೇಕಾಗಿದೆ. ಸಂಪೂರ್ಣ ಶರಣಾಗತಿ, ಸಮರ್ಪಣ ಮನೋಭಾವ, ಆತ್ಮ ನಿರಾಕರಣೆಯಂತಹ ತಾತ್ವಿಕ ನಿಲುವಿನಲ್ಲಿ ಬದುಕನ್ನು ಕಂಡಿರುವ ಪು.ತಿ.ನ. ಸಹಜವಾಗಿ ತಮ್ಮ ಕೃತಿಗಳಲ್ಲಿಯೂ ಅದನ್ನೇ ಪ್ರತಿಪಾದಿಸಿರುವುದು ಕಂಡುಬರುತ್ತದೆ. ಅಹಲ್ಯೆ, ಶಬರಿ, ಗೋಪಿಕೆಯರು ಇವರೇ ಪು.ತಿ.ನ. ಅವರ ಕೃತಿಗಳಲ್ಲಿ ನಾಯಕಿಯರಾಗಿದ್ದರೂ ಕೃಷ್ಣನನ್ನೇ ತಮ್ಮ ಮಹಾಕಾವ್ಯದ ನಾಯಕನನ್ನಾಗಿಸಿರುವಲ್ಲಿ ಪು.ತಿ.ನ. ಅವರ ಈ ತತ್ವ ನಿಚ್ಚಳವಾಗಿದೆ.

ಪು.ತಿ.ನ. ಅವರು ಮೂಲತ ಕವಿ. ಕವಿತೆಯಾಗಿರಲಿ, ನಾಟಕವಾಗಿರಲಿ, ಪ್ರಬಂಧ-ವಿಮರ್ಶೆಯಾಗಿರಲಿ ಎಲ್ಲದರಲ್ಲಿಯೂ ಕವಿಯಾಗಿಯೇ ವ್ಯಕ್ತವಾಗುತ್ತಾರೆ. ಆಧ್ಯಾತ್ಮಿಕ ಮತ್ತು ಧಾರ್ಮಿಕ ಚಿಂತನೆಯ ಮೂಲ ಸೆಲೆಯಿಂದ ಅವರ ಕಾವ್ಯ ಹೊರಹೊಮ್ಮುವುದರಿಂದ ಸಹಜವಾಗಿ ಅದು ಗೇಯಾತ್ಮಕತೆಯನ್ನು ಗಂಭೀರ ಚಿಂತನೆಯನ್ನೂ ಒಳಗೊಂಡು ಬಂದಿದೆ. ಸಂಗೀತ ಪ್ರಜ್ಞೆಯ ಮೂಲಕವೇ ಕಾವ್ಯ ಸಿರಿಯನ್ನು ಪ್ರಕಟಪಡಿಸುವ ಪು.ತಿ.ನ. ವಾಸ್ತವವಾಗಿ ವಾಗ್ಗೇಯಕಾರರೂ ಹೌದು. ಅನೇಕ ಹೊಸ ರಾಗಗಳ ಸೃಷ್ಟಿಯೊಂದಿಗೆ ರಾಗ-ತಾಳಬದ್ಧವಾದ ಕೃತಿಗಳನ್ನೇ ರಚಿಸಿದ್ದಾರೆ. ಹೀಗಾಗಿ ಇವರ ಅನೇಕ ಕವನಗಳು ಕೀರ್ತನೆಗಳ ಧಾಟಿಯಲ್ಲಿವೆ. ಈ ಹಿನ್ನೆಲೆಯಲ್ಲಿ ಪು.ತಿ.ನ. ಅವರನ್ನು ಆಧುನಿಕ ಕೀರ್ತನಕಾರರು ಎಂದರೂ ತಪ್ಪಿಲ್ಲ. ಭಕ್ತಿ ಪಂಥದ ಪರಂಪರೆಯಲ್ಲಿ ಆಧುನಿಕ ಕಾಲದಲ್ಲಿ ಕಂಡುಬರುವ ಮೂವರು ಕೀರ್ತನಕಾರರಲ್ಲಿ ಪು.ತಿ.ನ. ಅವರೂ ಒಬ್ಬರು ಎಂದೂ ಹೇಳಬಹುದು. (ಇನ್ನೊಬ್ಬರು ನಂಜನಗೂಡು ತಿರುಮಲಾಂಬ ಮತ್ತು ಮೂರನೆಯವರು ಮಾಸ್ತಿಯವರಾಗುತ್ತಾರೆ.) ಈ ದೃಷ್ಟಿಯಲ್ಲಿಯೂ ಪು.ತಿ.ನ. ಅವರ ಕಾವ್ಯವನ್ನು ವಿಶ್ಲೇಷಣೆಗೊಳಪಡಿಸಬಹುದಾಗಿದೆ. ಇದಕ್ಕೆ ಪೂರ್ತಿಯಾಗಿ ಇವರು ಮಾಡಿರುವ ಧಾರ್ಮಿಕ ಸಾಹಿತ್ಯದ ಅನುವಾದಗಳೂ (ಸಿರಿಬಾಯನುಡಿ, ನಮ್ಮಾಳ್ವಾರ್) ಸಹಾಯಕ್ಕೆ ಬರುತ್ತವೆ.

ಪು.ತಿ.ನ. ಅವರ ಸಾಹಿತ್ಯದ ಶ್ರೇಷ್ಠತೆಯಿರುವುದು ಅವರು ಆರ್ಷೇಯ ಮೌಲ್ಯಗಳನ್ನು ಒಪ್ಪುತ್ತಲೇ ಆಧುನಿಕ ಚಿಂತನೆಗಳನ್ನು ಪ್ರತಿಪಾದಿಸುವುದರಲ್ಲಿ. ತಾವು ಬೆಳೆದು ಬಂದ ಧಾರ್ಮಿಕ

ಪರಿಸರದ ಎಲ್ಲ ಮೌಲ್ಯಗಳನ್ನು ಶ್ರದ್ಧೆಯಿಂದ ಪಾಲಿಸುತ್ತಲೇ ಪಾಶ್ಚಾತ್ಯ ಚಿಂತನೆಯ ಮೂಸೆಯಲ್ಲಿ ಅದನ್ನು ಪರೀಕ್ಷೆಗೊಡ್ಡಿ ಗೆಲ್ಲಿಸುತ್ತಾರೆ. ಭಾರತೀಯತ್ವವನ್ನೂ ಅತ್ಯಂತ ಗಾಢವಾಗಿ ವೈಚಾರಿಕವಾಗಿ ಪ್ರಕಟಿಸಿರುವ ಪು.ತಿ.ನ. ಆಧುನಿಕ ಕಾಲದಲ್ಲಿರಬೇಕಾಗಿದ್ದ ಆದರ್ಶ ಭಾರತೀಯನಿಗೆ ನಿದರ್ಶನವಾಗಿದ್ದರು. ಭವ್ಯ ಸಂಸ್ಕೃತಿಯ ದಿವ್ಯ ಸಾಕ್ಷಿಯಾಗಿದ್ದ ಪು.ತಿ.ನ. ಕಾವ್ಯ ಚಿಂತನೆಯಲ್ಲಿ ಎಷ್ಟು ಸಂಕೀರ್ಣರಾಗಿದ್ದಾರೊ ಅದರ ಸೃಜನ ಶೀಲತೆಯಲ್ಲಿ ಅಷ್ಟೇ ಸರಳರಾಗಿದ್ದಾರೆ, ಆಪ್ತರಾಗಿದ್ದಾರೆ. ಅವರ ಕವಿತೆಗಳ, ಕಾವ್ಯರೂಪಕಗಳ ಅನೇಕ ಸಾಲುಗಳು, ಚಿತ್ರಗಳು, ಪಾತ್ರಗಳು, ಅವುಗಳ ಸರಳ ಸುಂದರ ದಿವ್ಯ ವ್ಯಕ್ತಿತ್ವಗಳು ನಮ್ಮ ಮನಸ್ಸಿನಲ್ಲಿ ಸ್ಥಿರವಾಗಿ ನಿಲ್ಲುತ್ತವೆ, ಆಕರ್ಷಿಸುತ್ತವೆ. ಒಂದು ಭವ್ಯ ಮಾನವತ್ವವನ್ನು ಕಟ್ಟಿಕೊಡುತ್ತವೆ. ಅದಕ್ಕಾಗಿಯೇ ಪು.ತಿ.ನ. ಮುಖ್ಯರಾಗುತ್ತಾರೆ, ಶ್ರೇಷ್ಠರಾಗುತ್ತಾರೆ. ಈ ಭವ್ಯತೆಯ ಮೇರುಸ್ಥಿತಿ ಅವರ ಶ್ರೀಹರಿಚರಿತೆಯಲ್ಲಿ ವ್ಯಕ್ತವಾಗುತ್ತದೆ. ಮಾನವತ್ವದ ಸಾರ್ಥಕತ್ವದ ದಿವ್ಯದರ್ಶನ ಮೂಡಿಸುತ್ತದೆ. ಆರ್ಷೇಯ ಮತ್ತು ಆಧುನಿಕ ಚಿಂತನೆಗಳ ಅದ್ಭುತ ಸಮ್ಮಿಳನವನ್ನು ತೋರಿಸುತ್ತದೆ. ಕವಿಯ 'ದರ್ಶನ'ದ ದಾರಿಗಳೆಲ್ಲ 'ಮಾನವತ್ವ'ದ ಗುರಿಯನ್ನೇ ತಲುಪುವುದರಿಂದಲೇ ಪು.ತಿ.ನ. ಕಾವ್ಯಲೋಕದಲ್ಲಿ ಚಿರಸ್ಥಾಯಿಯಾಗುಳಿಯುತ್ತಾರೆ.

-೩-

ಇಂತಹ ಒಬ್ಬ ಮಹಾನ್ ಕವಿಗಳನ್ನು ಹತ್ತಿರದಿಂದ ನೋಡುವ, ಮಾತನಾಡುವ ಅವರ ಒಲುಮೆಗೆ ಪಾತ್ರನಾಗುವ ಅವಕಾಶ ದೊರೆತದ್ದು ನನ್ನ ಬಾಳಿನ ಪುಣ್ಯಗಳಲ್ಲಿ ಒಂದು. ಹಲವು ಬಾರಿ ಅವರ ಮನೆಗೆ ಹೋಗಿ ಬಿ.ಎಂ.ಶ್ರೀ. ಪ್ರತಿಷ್ಠಾನದ ಸಂಬಂಧದಲ್ಲಿ ಸಂಸ್ಥಾಪಕರಾಗಿದ್ದ ಎಂ. ವಿ. ಸೀತಾರಾಮಯ್ಯನವರ ಸಂದೇಶಗಳನ್ನು ಮುಟ್ಟಿಸುವ, ಪತ್ರಗಳನ್ನು ತಲುಪಿಸ ವಾಹಕನಾಗಿ ಪರಿಚಿತನಾಗಿದ್ದೆ. 1991 ರಲ್ಲಿ ದೇ.ಜ.ಗೌ. ಅವರಿಗೆ ಸಮರ್ಪಿಸಿದ ಗೌರವ ಸಂಪುಟದ ಸಮಿತಿಯ ಸದಸ್ಯನಾಗಿ ಆಲ್ಲ ಚಿರಂಜೀವಿಯವರ ಆಶಯದಂತೆ ಪು.ತಿ.ನ. ಅವರ ಸಂದೇಶವನ್ನು ಪಡೆಯುವ ಸಂದರ್ಭದಲ್ಲಿ ಹಲವುಬಾರಿ ಅವರ ಮನೆಗೆ ಹೋಗಿ ಅವರ ಬಳಿ ತೀರ ಸಮೀಪದಲ್ಲಿ ಕುಳಿತು ಅವರು ಮೆಲುದನಿಯಲ್ಲಿ ಹೇಳುತ್ತಿದ್ದುದನ್ನು ಬರೆದುಕೊಳ್ಳುವ ಅವಕಾಶ ಲಭಿಸಿತ್ತು. ಅವರನ್ನು ನೋಡಿದಾಗಲೆಲ್ಲ ನನ್ನ ತಂದೆಯ ನೆನಪಾಗುತ್ತಿತ್ತು. ತಂದೆಯವರೂ ಅವರಂತೆಯೇ ಕಾಣುತ್ತಿದ್ದುದರಿಂದ ಯಾವುದೋ ಒಂದು ಬಗೆಯ ಆಪ್ತತೆ ನನ್ನಲ್ಲಿ ಮೂಡಿಸುತ್ತಿತ್ತು. ಅಕ್ಟೋಬರ್ 13, 1998 ರಂದು ಅವರು ನಮ್ಮನ್ನಗಲಿದರೂ ಅನೇಕ ಮಧುರ ಸ್ಮೃತಿಗಳೊಂದಿಗೆ ಇಂದಿಗೂ ನಮ್ಮೊಂದಿಗೆ ಇದ್ದಾರೆ.

ಬಿ.ಎಂ.ಶ್ರೀ. ಪ್ರತಿಷ್ಠಾನದ ಗೌರವ ಸದಸ್ಯರಾಗಿ ಪ್ರತಿಷ್ಠಾನಕ್ಕೆ ಗೌರವವನ್ನು ತಂದು ಕೊಟ್ಟಿದ್ದ ಪು.ತಿ.ನ. ಅವರು ಪ್ರತಿಷ್ಠಾನದ ಹಿತೈಷಿಗಳಾಗಿದ್ದರು. ಚಿಕ್ಕಮಗಳೂರಿನ ಸಾಹಿತ್ಯಸಮ್ಮೇಳನದ ಅಧ್ಯಕ್ಷರಾಗಿದ್ದಾಗ ಅಧ್ಯಕ್ಷ ಭಾಷಣದಲ್ಲಿ ಪ್ರತಿಷ್ಠಾನವನ್ನು ಪ್ರಸ್ತಾಪಿಸಿ ಪ್ರೋತ್ಸಾಹಿಸಿದ್ದರು. ಪು.ತಿ.ನ. ಅವರಿಗೆ 'ಪದ್ಮಶ್ರೀ', 'ಪಂಪ ಪ್ರಶಸ್ತಿ'ಗಳ ಗೌರವ ಸಂದಿದೆ. ನಾಡಿನ ಜನತೆ, ಅಕಾಡೆಮಿ, ಸಂಘಸಂಸ್ಥೆ, ವಿಶ್ವವಿದ್ಯಾನಿಲಯಗಳೂ ಗೌರವಿಸಿವೆ. ಪು.ತಿ.ನ. ಅವರ ಸಾಹಿತ್ಯ ಕನ್ನಡ ಸಾಹಿತ್ಯದ ವಿಶಿಷ್ಟ ಮಾದರಿಯ ಸಾಹಿತ್ಯವಾಗಿ ಪ್ರಧಾನವಾಗಿದೆ. ಸರ್ಕಾರ ಪು.ತಿ.ನ.ರ ಸಾಹಿತ್ಯ ಸಾಧನೆಗಳ ಸ್ಮರಣೆಗಾಗಿ ಟ್ರಸ್ಟ್ ಅನ್ನು ರಚಿಸಿದೆ. ಟ್ರಸ್ಟ್ ಅದನ್ನು ನಿಷ್ಠೆಯಿಂದ ಮಾಡುತ್ತಿದೆ. ನಾಡು ಶತಮಾನೋತ್ಸವದ ಸಂದರ್ಭದಲ್ಲಿ ಪು.ತಿ.ನ.ರನ್ನು ಸೂಕ್ತ ರೀತಿಯಲ್ಲಿ ನೆನಪಿಸಿಕೊಂಡಿದೆ. ಮುಂದೆಯೂ ಸದಾ ನೆನಪಿಸಿಕೊಳ್ಳುತ್ತಿರುತ್ತದೆ. ಅಂತಹ ಕೊಡುಗೆಯನ್ನು ಪು.ತಿ.ನ. ಕನ್ನಡಕ್ಕೆ ಕೊಟ್ಟಿದ್ದಾರೆ.

* * *

# ಹಲ್ಮಿಡಿ ಶಾಸನದ ಪಶುಪತಿ

-ಸೀತಾರಾಮ ಜಾಗೀರ್‌ದಾರ್

ಕನ್ನಡ ಭಾಷೆಯ ಅಭ್ಯಾಸಗಳಿಗೆ ಹಲ್ಮಿಡಿ ಶಾಸನವು ಸುಪರಿಚಿತ ವಸ್ತು. ಆದರೆ ಅದರಲ್ಲಿನ ಅನೇಕ ಸಂಗತಿಗಳ ಬಗೆಗೆ ಇನ್ನೂ ನಮಗೆ ಸರಿಯಾದ ಮಾಹಿತಿ ಇಲ್ಲವೆಂದರೆ ತಪ್ಪಾಗದು. ಹಲ್ಮಿಡಿ ಶಾಸನಕ್ಕೆ ಈಗ ವಿದ್ವಾಂಸರು : ಡಾ|| ಡಿ. ಸಿ. ಸರ್ಕಾರ್[೧] ಡಾ|. ಪಿ. ಬಿ. ದೇಸಾಯಿ ಹಾಗೂ ಅವರ ಸಹ ಲೇಖಕರು-ಡಾ|| ಎಸ್. ಎಚ್. ರಿತ್ತಿ ಮತ್ತು ಡಾ|| ಬಾ. ರಾ. ಗೋಪಾಲ ಮೊದಲಾದವರು ಕ್ರಿ.ಶ. ೪೦೫ ರಿಂದ ೪೩೦ ಎಂದು ಕಾಲವನ್ನು ನಿಗದಿಪಡಿಸಿದ್ದಾರೆ.[೨] ಗುಪ್ತವಂಶದ ಇಮ್ಮಡಿ ಚಂದ್ರಗುಪ್ತನ ಸಮಕಾಲೀನ ದೊರೆ ಕದಂಬ ಕಾಕುಸ್ಥವರ್ಮ. ಅರ್ಥಾತ್ ಕ್ರಿ.ಶ. ೩೭೫-೪೧೪ ರಲ್ಲಿ ಇದ್ದ ಚಂದ್ರಗುಪ್ತನ ಸಮಕಾಲೀನ. ಆದುದರಿಂದ ಹಲ್ಮಿಡಿಯ ಶಾಸನದಲ್ಲಿನ ಸಂಗತಿಗಳನ್ನು ಕ್ರಿ.ಶ. ೪೦೦ ರ ಎಡ ಬಲದಲ್ಲಿ ನಡೆದ ಘಟನೆಗಳೆಂದು ಪರಿಗಣಿಸಬೇಕಾಗುತ್ತದೆ. ಹಲ್ಮಿಡಿ ಶಾಸನವನ್ನು ಕದಂಬ ಕಾಕುಸ್ಥವರ್ಮನ ಕಾಲದಲ್ಲಿ ಬರೆಯಲಾಗಿದ್ದು ಹಲ್ಮಿಡಿ ಊರಜನ ಕೊಡಬೇಕಾದ ಕುಱುಮ್ಬಿಡಿ ಎಂಬ ಕರವನ್ನೂ ಮತ್ತು ಆ ಊರ ಭಟ್ಟರು ಅಲ್ಲಿನ ಗದ್ದೆಯ ಕರ "ಪತ್ತೊನ್ದಿ" (ದಶಏಂಧ) ಎಂಬುದನ್ನೂ ಕೊಡಬೇಕಾಗಿಲ್ಲ ಎಂಬ ಆಜ್ಞೆಯನ್ನು ಆ ಊರೊಡೆಯ ವಿಜ ಅರಸ ಮತ್ತು ಆವಿರುವ ಆ ನಂದಾವಿಳೆ ನಾಡೊಡೆರಿಯರಾದ ಮೃಗೇಶ ಮತ್ತು ನಾಗ ಎಂಬವರು ಸೇರಿ ಹೊರಡಿಸಿದ-ಹಾಕಿಸಿದ-ರಾಜಾಜ್ಞೆ. 'ಪಲ್ಮಿಡಿ' ಹಾಗೂ ಮಾಟಿ ವಿಳ್ಳಿಯನ್ನೂ ಮತ್ತು ಆ ಗ್ರಾಮಗಳನ್ನುಳ್ಳ ನದಾವಿಳೆ ನಾಡನ್ನೂ ದತ್ತಿ ಹಾಕಿಕೊಟ್ಟ ವ್ಯಕ್ತಿಯೆ 'ಪಶುಪತಿ' ಎಂಬ ದೊರೆ. ಈತ ಅಳುಪ ಅಥವಾ ಭಟಾರಿ ಕುಲಕ್ಕೆ ಸೇರಿದ ವ್ಯಕ್ತಿ . ದಾನ ಕೊಡುವುದರಲ್ಲೂ ಯುದ್ಧ ಭೂಮಿಯಲ್ಲಿ ಯುದ್ಧ ಮಾಡುವಲ್ಲೂ "ಪಶುಪತಿ" ಎಂದರೆ "ಕದನ ತ್ರಿಣೇತ್ರ" ಎಂದೇ ಪ್ರಸಿದ್ಧನಾಗಿದ್ದ. ಈತನ ಬಗ್ಗೆ ಹೆಚ್ಚು ವಿವರಗಳನ್ನುಳ್ಳ ಶಾಸನವೊಂದು ತಾಳಗುಂದದಲ್ಲಿದೆ.

## ಶಾಸನದ ಪಾಠ ಇಂತಿದೆ :

೧. ಸ್ವಸ್ತಿ ಮೂರ್ಧ್ನಿ ನ್ಯಸ್ತಂ ಶಶಿನಮಸಕಲಂ ಗಜೂಗಸಜೂಗ್ಟಿಶಿರತರ ಕರಂ

೨. ಯೋ ವೈದಗ್ಧ್ಯಾದ್ವಹತಿ ಸಲಲಿ.......ಜಯತಿ ಪಶುಪತಿಃ೧

೩. ತದನು ಪಶುಪತೇ ಱ್ಪ್ರಸಾದ ಜಾತೋ ಜಯತಿಪುನರ್ಜ್ಜನಿತೋ ಯಥೇವ ಕಾಮಃ

೪. ಪಶುಪತಿರಿತಿಯಸ್ಯ ನಾಮದಾನೇ ವಿಶಿನಿದಿತಂ ಸಮರೇಚ

ದಕ್ಷಿಣಸ್ಯಾಮ್೨ ಕಾಕುಸ್ಥೇನ ಭಟಾರಿ

೫. ತಿಜ ತಿಲಕೇನಾನನ್ಯ ರೂಪಶ್ರಿಯಾ ಮಾತ್ರಾಚಾಪಿ ಕದಮ್ಬ ವಜ್ಯ
 ಭವಯಾ ಲಕ್ಷ್ಮ್ಯಾ ಚ ಯೋತ್ಪಾದಿತಃ
೬. ತೇನಾನೇಕ ಮಹಾದ್ಧ್ವರೇಷು ದದತಾ ಸಮ್ಮಾನಿತೈರ್ಜ್ಜಿವಿತಂ ವಿಪ್ರೈರಕ್ಷತ ತಣ್ಡುಲೈರಡರಡ
೭. ಸ್ತುಙ್ಗಂ ಶಿರೋ ವಿಭ್ರಾತಾಃ ದಶಮಣ್ಡಲಿಕೇಷು ನಾಯಕತ್ವಂ
 ಸಹಶುಲ್ಕೇನ ಚ ಬೋದಿನಾಮ ವಾಪ್ಯ ಕು
೮. ಲತೋ ವಿನಯೇನ ಚ ಪ್ರಸಾದ್ಯ ಕ್ಷಿತಿಪಂ ಸ್ವಾಮಿನ ಮುನ್ನತೌ ಧನಾನಾಂಳ
 ವಾಞ್ಛತಾಜಗತಿ ಧರ್ಮ್ಮಮನ್ವಹಂ .
೯. ಪಾತ್ರ ಗುಣಪಾರಗಾಮಿಷು ತ್ರಿಜ್ಯದನ್ನ ಧನಮೋವಮಾಹೃತಂ
 ಸ್ಥಾನಕುಞ್ಜಪುರತೀರ್ತ್ಥ ವಾಸಿಷುಃ
೧೦. .....ಣಗೋಪ್ಯನೇಕ (ಸ್ಯ) ಶಾಲಯಾ ಪಾಲಿತಃ ಪರದಾನ ಸಾಧಿತೇನ.........೬
೧. ಭ್ರಮರ ವಿಲಸಿತ
೨. ಪುಷ್ಪಿತಾಗ್ರ (ಅರ್ಧ ಸಮವೃತ್ತ)
೩. ಶಾರ್ದೂಲ ವಿಕ್ರೀಡಿತ
೪. ಮಾಲಭಾರಿಣಿ (ಅರ್ಧ ಸಮವೃತ್ರ)
೫. ರಥೋದ್ಧತ
೬. ಶ್ಲೋಕ (?)

ಈ ಶಾಸನವನ್ನು ಅದು ಹೊಂದಿರುವ ಪದ್ಯಗಳನ್ನು ಅನುಲಕ್ಷಿಸಿ-ಪ್ರಸ್ತಾರಕ್ಕನುಗುಣವಾಗಿ-ಬರೆದರೆ ಹೀಗಿರುತ್ತದೆ :

ಭ್ರಮರ ವಿಲಸಿತ ಸ್ವಸ್ತಿ ಮೂರ್ಧ್ನಿ ನ್ಯಸ್ತಂ ಶಶಿನಮಸಕಲಂ
ಗಙ್ಗಾ ಸಙ್ಗಾ ಚ್ಛಿಶಿರ ತರಕರಂ
ಯೋ ವೈದಗ್ಧ್ಯಾದ್ವಹತಿ ಸಲಲಿ
........ಜಯತಿ ಪಶುಪತಿಃ ॥*

ಪುಷ್ಪಿತಾಗ್ರ ॥ ತದನು ಪಶುಪತೇಃಪ್ರಸಾದಜಾತೋ
ಜಯತಿ ಪುನರ್ಜ್ಜನಿತೋ ಯಥೇವ ಕಾಮಃ
ಪಶುಪತಿರಿತಿ ಯಸ್ಯ ನಾಮ ದಾನೇ
ದಿಶಿವಿದಿತಂ ಸಮರೇಚದಕ್ಷಿಣಸ್ಯಾಮ್ ॥*

ಶಾ.ವಿ. ॥ ಕಾಕುಸ್ಥೇನ ಭಟಾರಿನಜ್ಯ ತಿಲಕೇನಾನನ್ಯರೂಪಶ್ರಿಯಾ

ಮಾತ್ರಾಚಾಪಿ ಕದಮ್ಬ ವಜ್ರಭವಯಾ ಲಕ್ಷ್ಮ್ಯಾ ಚ ಯೋತ್ಪಾದಿತಃ

ತೇನಾನೇಕ ಮಹಾದ್ವರೇಷುದದತಾಸಮ್ಮಾನಿತೈಪ್ಲಾವಿತಂ

ವಿಪ್ರೈರಕ್ಷತ ತಣ್ಡುಲೈರಹರಹಸ್ತುಙ್ಗಂ ಶಿರೋ ವಿಭ್ರತಾ ॥

ಮಾಲಭಾರಿಣಿ ॥ ದಶಮಣ್ಡಲಿಕೇಷು ನಾಯಕತ್ವಂ

ಸಹಶುಲ್ಕೇನ ಚ ಬೋಧಿನಾಮವಾಪ್ಯ

ಕುಲತೋ ವಿನಯೇನ ಚ ಪ್ರಸಾಧ್ಯ

ಕ್ಷಿತಿಪಂ ಸ್ವಾಮಿನ ಮುನ್ನತೌ ಧನಾನಾಂ ॥*

ರಥೋದ್ಧತ ॥ ವಾಞ್ಛತಾ ಜಗತಿ ಧರ್ಮ್ಮಮನ್ವಹಂ

......ಪಾತ್ರ ಗುಣಪಾರಗಾಮಿಷು

ತ್ರಿಜ್ಯದನ್ನಧನ ಮೇವ ಮಾಹೃತಂ

ಸ್ಥಾನಕುಞ್ಜಪುರ ತೀರ್ತ್ಥವಾಸಿಷು ॥

ಶ್ಲೋಕ ॥ ........ಣ ಗೋಪ್ಯನೇಕ (ಸ್ಯ) ಶಾಲಯಾಪಾಲಿತಃ

ಪರದಾನ ಸಾಧಿತೇನ.........................॥*

* ಪದ್ಯಗಳ ಪ್ರಸ್ತಾರಕ್ಕೆ-ಗುಣ ಲಕ್ಷಣಕ್ಕೆ-ವೃತ್ತ ನಾಮಗಳನ್ನು ಗುರುತಿಸಲು ಬಳಸಿದ ಪುಸ್ತಕಗಳು:

(ಅ) ಪ್ರೊ. ಎಚ್. ಡಿ. ವೇಲಣಕರ್; ಹೇಮಚಂದ್ರನ ಛಂದೋನುಶಾಸನ.

(ಆ) ಸೀತಾರಾಮ ಜಾಗೀರ್‌ದಾರ್ : ಛಂದೋರಚನಾ ಸಂಶೋಧನೆಗಳು.

ತಾಳಗುಂದದಲ್ಲಿ ಇರುವ ಪ್ರಣವೇಶ್ವರ ದೇವಾಲಯದ ದ್ವಾರಬಂಧದ ಕಂಬದ ತೋಳಿನ (on the dore jamb) ಮೇಲೆ ಈ ಶಾಸನವನ್ನು ಪೇಟಿಕಾಶಿರದ ಬ್ರಾಹ್ಮೀ ಲಿಪಿಯಲ್ಲಿ (Box- headed characters) ಬರೆಯಲಾಗಿದೆ. ಆರು ಪದ್ಯಗಳನ್ನುಳ್ಳ ಈ ಶಾಸನದ ವಿವರ ಇಂತಿದೆ-

ಶುಭವಾಗಲಿ. ಶಿರದಲ್ಲಿ ಕಲಾನ್ಯೂನ ಚಂದ್ರ, ಯಾರು ಗಂಗಾ ಸಂಗದಿಂದ ಶೀತಕರ (ತಂಪಾದ ಕಿರಣ) ಗಳನ್ನು ಹೊಂದಿದ್ದಾನೋ ಅವನನ್ನು ಹೊಂದಿರುವ, ವೈದಗ್ಧತೆ (ವಿದಗ್ಧತೆ)ಯಿಂದ ಪ್ರಪಂಚದ ಸೃಷ್ಟಿಯನ್ನು ಸಲೀಲಾಜಾಲವಾಗಿ ನಡೆಸುತ್ತಿರುವನೋ ಆ ಪಶುಪತಿಗೆ (=ಈಶ್ವರನಿಗೆ) ಜಯವಾಗಲಿ.

ಆ ಪಶುಪತಿಯ ಪ್ರಸಾದದಿಂದ ಜನ್ಮತಾಳಿದ (ಈ ವ್ಯಕ್ತಿ) ಪಶುಪತಿಯೆಂಬ ಹೆಸರನ್ನೇ ಹೊಂದಿದ, ಮತ್ತೆ ದಾನ ಕೊಡುವುದರಲ್ಲಿ ಅಂತೆಯೆ ಯುದ್ಧಭೂಮಿಯಲ್ಲಿ ಯುದ್ಧ ಕೌಶಲವನ್ನು ಮೆರೆಯುವಲ್ಲಿ ಪಶುಪತಿ (=ಕದನ ತ್ರಿಣೇತ್ರ) ಎಂದೇ ಪ್ರಸಿದ್ಧನಾದ. ಅದಕ್ಕೆ ಕಾರಣ ದಕ್ಷಿಣದ

(ದಕ್ಷಿಣ ಭಾರತದ) ಒಂದು ಯುದ್ಧದಲ್ಲಿ ಆತ ಆ ಕದನತ್ರಿಣೇತ್ರನ ಹಾಗೆ ಯುದ್ಧವನ್ನು ಮಾಡಿದ.5

ಈ ಪಶುಪತಿಗೆ ತಂದೆ ಭಟಾರಿ ವಂಶದ ಕಾಕುಸ್ಥ ಮತ್ತು ತಾಯಿ ಕದಂಬ ವಂಶದ ರೂಪವತಿ ಲಕ್ಷ್ಮೀ; ಯಾರು ಅನೇಕ ಮಹಾಯಜ್ಞಗಳನ್ನು ಮಾಡಿಸಿ ವಿಪ್ರರಿಂದ ಆಶೀರ್ವಾದವನ್ನು ಪಡೆದು ಸಮ್ಮಾನಿತರಾಗಿದ್ದರು.

ಈ ಪಶುಪತಿ, ತನ್ನ ಒಡೆಯನಿಗೆ-ಅಧಿರಾಜನಿಗೆ (ಕದಂಬ ದೊರೆಗೆ) ವಿಶೇಷ ಧನ ಸಂಪತ್ತನ್ನು ಅರ್ಪಿಸಿ ವಿನಯವನ್ನು ಮೆರೆದು ಹತ್ತಾರು ಮಾಂಡಲಿಕರಲ್ಲಿ ನಾಯಕ ಎನ್ನಿಸಿಕೊಂಡ. ಆತನ ಆ ಸಂಪತ್ತು ಶುಲ್ಕದಿಂದ ( ತೆರಿಗೆಯಿಂದ) ಸಂಗ್ರಹಿಸಿದ್ದಾಗಿತ್ತು.

5. ಹಲ್ಮಿಡಿಯ ಶಾಸನದಲ್ಲಿ ದಕ್ಷಿಣಾಪಥದ ಸಾತವಾಹನರಲ್ಲಿ (ಬಡು ಶತವಹನ) ಪಶುಪತಿಯು ಘನಘೋರ ಯುದ್ಧವನ್ನು ಮಾಡಿದುದಾಗಿಯೂ ತನ್ನ ಬೃತರಿಗೆ-ಮತ್ತೆ ವಿಪ್ರರಿಗೆ-ಅನೇಕ ದಾನದತ್ತಿಗಳನ್ನಿತ್ತು 'ದಾನ ಪಶುಪತಿ' ಎಂದೇ ಪ್ರಸಿದ್ಧನಾಗಿದ್ದುದನ್ನು ಗದ್ಯದಲ್ಲಿ ಬರೆದಿದೆ. "ದಾನ ಪಶುಪತಿಯೆನ್ದು ಪೊಗೞಿಪ್ಪಟ್ಟಣ" ಎಂಬ ವಾಕ್ಯವನ್ನು ಗಮನಿಸಿ. ಈ ಪಟ್ಟಣ ಸ್ಥಾನಕುಞ್ಜಪುರ (=ಸ್ಥಾನಕುಂದಪುರ)- ತಾಳಗುಂದ ಎಂಬುದು ಇದೀಗ ಸ್ಪಷ್ಟ.

ಈ ಪಶುಪತಿ, ಜಗತ್ತಿನಲ್ಲಿ ಧರ್ಮವನ್ನು ರಕ್ಷಿಸಿ, ಪ್ರವಹಿಸಿ, ಸದ್ಗುಣಗಳಿಂದ ಸಂಪನ್ನನಾಗಿ, ಸ್ಥಾನಕುಞ್ಜಪುರ ತೀರ್ಥದಲ್ಲಿ (ತಾಳಗುಂದಪುರ ತೀರ್ಥದಲ್ಲಿ) ವಾಸಿಸುವ ಯೋಗ್ಯರಾದ ಮೂವತ್ತು ಜನ ಯೋಗ್ಯರಿಗೆ ಧನಕನಕಾದಿಗಳನ್ನು ಅನ್ನದಾನವನ್ನೂ ನೀಡಿದ-ಯಾರು ಉತ್ತಮ ಧರ್ಮವನ್ನು ಜಗತ್ತಿನಲ್ಲಿ ಪ್ರತಿಪಾದಿಸಿದರು.

ಈ ಪಶುಪತಿ ಅನೇಕ ಗೋಶಾಲೆಗಳನ್ನು ಸಂರಕ್ಷಿಸಿದ ಮತ್ತೆ ಪರರು ಇತ್ತ ದಾನಗಳನ್ನು ಮುಂದುವರೆಸಿ ಮೆರೆದ........ಇತ್ಯಾದಿ.

ಭಟಾರಿ ಕಾಕುಸ್ಥ

ಹೆಂ. ಲಕ್ಷ್ಮೀ (ಕದಂಬರಾಜ ಕನ್ಯೆ)

ಪಶುಪತಿ (ಮಾಂಡಲಿಕ ನಾಯಕ)

ಹಲ್ಮಿಡಿ ಹಾಗೂ ತಾಳಗುಂದದ ಈ ಶಾಸನದಿಂದ ಪಶುಪತಿಯ ವಂಶ ವಿವರಣೆಯ ಮೂಲಕ ಆಳುಪವಂಶ ಮತ್ತು ಭಟಾರಿವಂಶ ಒಂದೇ ಎಂಬುದು ಸ್ಫಟಿಕಶಲಾಕೆಯ ಹಾಗೆ ಸ್ಪಷ್ಟವಾಗಿದೆ. ಮತ್ತೆ ಅವರಿಗೂ ಕದಂಬರಿಗೂ ಇದ್ದ ವೈವಾಹಿಕ ಸಂಬಂಧಗಳೂ ತಿಳಿದುಬಂದಿದೆ. ಪಶುಪತಿಯ ಪ್ರಸಾದಗುಣ ಅಭಿವ್ಯಕ್ತವಾಗಿದೆ. ಈ ಎರಡು ಶಾಸನಗಳಲ್ಲಿ ಒಂದು ಇನ್ನೊಂದಕ್ಕೆ ಪೂರಕವಾಗಿದೆ.

* * *

# ಕೆಂಪೇಗೌಡನ ಜೀವಿತ ಮತ್ತು ಆಳ್ವಿಕೆಯ ಕಾಲ

## ಒಂದು ಪರಿಶೀಲನೆ

-ಕೆ. ಚಂದ್ರಮೌಳಿ

ಬೆಂಗಳೂರಿನ ಬಗ್ಗೆ ಭವ್ಯ ಕನಸನ್ನು ಕಂಡು ಅದನ್ನು ನನಸಾಗಿಸಿಕೊಂಡ ಅಪರೂಪದ ವಿಶಿಷ್ಟವ್ಯಕ್ತಿ ಕೆಂಪೇಗೌಡ. ಶಾಸನಗಳಲ್ಲಿ ಇವನ ಹೆಸರು ಕೆಂಪ(ಯ) ದೇವರಸ, ಕೆಂಪಯಗವುಡ, ಹಿರಿ ಕೆಂಪ ಮಹೀಪಾಲ, ಹಿರಿಯ ಕೆಂಪೇಗೌಡ ಎಂದು ಬಂದಿದೆ. ಜನಜನಿತವಾದ ಹೆಸರುಗಳಲ್ಲಿ ಹಿರಿಯ ಕೆಂಪೇಗೌಡ, ಒಂದನೆಯ ಕೆಂಪೇಗೌಡ ಮತ್ತು ಬೆಂಗಳೂರು ಕೆಂಪೇಗೌಡ ಮುಖ್ಯವಾದುವು. ಇವನು ಯಲಹಂಕ ನಾಡಪ್ರಭುವಾಗಿದ್ದ ರಣಭೈರೇಗೌಡನ ವಂಶದವನೆಂದು ತಿಳಿದುಬರುತ್ತದೆ. ಕ್ರಿ.ಶ. ೧೬೯೮ ರಲ್ಲಿ ಕೆಂಪವೀರಪ್ಪಗೌಡನು ಮಂಗಳೂರು ಜಿಲ್ಲೆಯ ಸುಬ್ರಹ್ಮಣ್ಯ ದೇವಾಲಯಕ್ಕಾಗಿ ಮಾಗಡಿ ಪತ್ತಿರದ 'ಸುಬ್ಬರಾಯ ಬೇಡರ ಹಳ್ಳಿ'ಯನ್ನು ದಾನಮಾಡಿದ ಶಾಸನದಲ್ಲಿ ಕೆಂಪೇಗೌಡನ ವಂಶಾವಳಿ ಚೆನ್ನಾಗಿ ಮೂಡಿಬಂದಿದೆ. ಈ ಶಾಸನದ ಪ್ರಕಾರ 'ಜಿಯ್ಯಪ್ಪ-ಗಿಡ್ಡಪ್ಪ-ನಾಚಪ-ಕೆಂಪನಾಚಪ' ಇವರುಗಳ ನಂತರ ಹಿರಿಯ ಕೆಂಪ ಮಹೀಪಾಲನ ಹೆಸರು ಬಂದಿರುವುದರಿಂದ (ಮೈಸೂರು ಆರ್ಕಿಲಾಜಿಕಲ್ ರಿಪೋರ್ಟ್ ೧೯೪೩) ಕೆಂಪೇಗೌಡನು ಜಿಯ್ಯಪ್ಪ ಅಥವ ಜಯಗೌಡನ ನೇರ ಸಂತತಿಯವನೆಂದು ಹೇಳಬಹುದು.

ಬೆಂಗಳೂರು ಕೆಂಪೆಗೌಡನ ಆಳ್ವಿಕೆಯ ಕಾಲದ ಬಗ್ಗೆ ವಿದ್ವಾಂಸರಲ್ಲಿ ಮತಭೇದಗಳಿವೆ. ಎಂ.ವಿ. ಕೃಷ್ಣರಾವ್ ಮತ್ತು ಎಂ. ಕೇಶವಭಟ್ಟರ ಪ್ರಕಾರ ಕೆಂಪೇಗೌಡನ ಆಳ್ವಿಕೆಯ ಕಾಲ ಕ್ರಿ.ಶ. ೧೫೧೩ ರಿಂದ ೧೫೬೯ ('ಕರ್ನಾಟಕ ಇತಿಹಾಸದರ್ಶನ'). ಎನ್. ರಾಜಗೋಪಾಲರಾವ್ ('ಕರ್ನಾಟಕ ಪರಂಪರೆ', ೨ನೆಯ ಸಂಪುಟ) ಮತ್ತು ಎಸ್. ಎಸ್. ಭೂಸರೆಡ್ಡಿ ('ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ') ಈ ಕಾಲವನ್ನು ಒಪ್ಪುತ್ತಾರೆ. ಕರ್ನಾಟಕ ಸರ್ಕಾರದ ಬೆಂಗಳೂರು ಜಿಲ್ಲೆಯ ಗೆಜೆಟಿಯರ್‌ನಲ್ಲಿ (೧೯೯೦) ಇದನ್ನು ಕ್ರಿ.ಶ. ೧೫೧೦-೧೫೭೦ ಎಂದು ತೋರಿಸಿದೆ. ಡಾ. ಎಚ್. ಎಸ್. ಗೋಪಾಲರಾವ್ ('ಕೆಂಪೇಗೌಡರ ವಂಶಸ್ಥರು')೧೫೧೦ ರಿಂದ ೧೫೭೮ ರ ವರೆಗಿನ ಕಾಲವನ್ನು ಹೇಳುತ್ತಾರೆ. ವಿ. ಎಸ್. ಸಂಪತ್ಕುಮಾರಾಚಾರ್ಯ ಮತ್ತು ಎಚ್. ವಿ. ಶ್ರೀನಿವಾಸಮೂರ್ತಿ ಅವರು ('ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ') ಈ ಕಾಲವನ್ನು ಕ್ರಿ.ಶ. ೧೫೮೮ ರಿಂದ ೧೬೦೮ ಎಂದು ಹೇಳಿದ್ದಾರೆ. ಕರ್ಲಮಂಗಲಂ ಶ್ರೀಕಂಠಯ್ಯ ('ಕೆಂಪೇಗೌಡನ ಜಯಪ್ರಶಸ್ತಿ') ಹಿರಿಯ ಕೆಂಪೇಗೌಡನ ಆಳ್ವಿಕೆಯ ಕಾಲವನ್ನು ಕ್ರಿ.ಶ. ೧೫೩೧-೧೬೦೮ ಎಂದು ನಿರ್ಧರಿಸಿದ್ದಾರೆ.

ಕೆಂಪೇಗೌಡನ ಆಳ್ವಿಕೆಯ ಕಾಲವನ್ನು ನಿರ್ಧರಿಸಲು ಈ ವಿದ್ವಾಂಸರೆಲ್ಲರೂ ಶಾಸನ ಹಾಗೂ ಇತರ ಐತಿಹ್ಯಗಳನ್ನು ಆಧಾರವಾಗಿ ಇಟ್ಟುಕೊಂಡಿದ್ದಾರೆಂಬುದರಲ್ಲಿ ಅನುಮಾನವೇ ಇಲ್ಲ. ಆದರೆ ಇವುಗಳ ಜೊತೆಗೆ ಇನ್ನೂ ಎರಡು ಮಾನದಂಡಗಳನ್ನು ಸೇರಿಸಿದರೆ ನಮ್ಮ ಪರೀಕ್ಷೆ ಹೆಚ್ಚು ಕಾರ್ಯಶೀಲವಾಗುತ್ತದೆ. ಒಬ್ಬ ನಾಡಪ್ರಭುವಿನ ಆಳ್ವಿಕೆಯ ಕಾಲದ ಜೊತೆಗೆ

ಅವನ (ಅ) ಜೀವಿತ ಕಾಲ ಮತ್ತು (ಆ) ಅವನು ಹುಟ್ಟಿದಾಗ ಅವನ ತಂದೆಯ ವಯಸ್ಸಿನ ಎಣಿಕೆ ಎರಡು ಮುಖ್ಯ ಮಾನದಂಡಗಳಾಗುತ್ತವೆ. ಕೆಂಪೇಗೌಡನ ಆಳ್ವಿಕೆಯ ಕಾಲ ನಿರ್ಣಯದಲ್ಲಿ ವಿವಿಧ ವಿದ್ವಾಂಸರಿಗೆ ಇರುವ ಭಿನ್ನಾಭಿಪ್ರಾಯಗಳಿಗೆ ಕಾರಣವನ್ನು ಹುಡುಕಲು, ಪ್ರಾತಿನಿಧಿಕವಾಗಿ ಕಾಣುವ ಕರ್ಲಮಂಗಲಂ ಶ್ರೀಕಂಠಯ್ಯ ಮತ್ತು ಗೆಜೆಟಿಯರ್‌ನಲ್ಲಿನ ಎರಡು ಅಭಿಪ್ರಾಯಗಳನ್ನು ಪರೀಕ್ಷಿಸಬಹುದು.

ಕರ್ಲಮಂಗಲಂ ಶ್ರೀಕಂಠಯ್ಯನವರು ಸಂಪಾದಿಸಿದ 'ಗೌಡಕುಲ ವಿಭೂಷಣ ಕೆಂಪೇಗೌಡನ ಜಯಪ್ರಶಸ್ತಿ'ಯಲ್ಲಿ ಕೊಟ್ಟಿರುವ ಆಳ್ವಿಕೆಯ ಕಾಲಮಾನದಿಂದ ಪ್ರತಿಯೊಬ್ಬರ ಜೀವಿತಕಾಲ ಮತ್ತು ಅವರು ಹುಟ್ಟಿದಾಗ ತಂದೆಯ ವಯಸ್ಸು ಏನಾಗಿರಬಹುದೆಂದು ಈ ಕೆಳಕಂಡಂತೆ ಎಣಿಕೆ ಮಾಡಬಹುದು.

| ಹೆಸರು | ಆಡಳಿತ ಕಾಲ | ಜೀವಿತ ಕಾಲ (ವರ್ಷ) | ಹುಟ್ಟಿದಾಗ ತಂದೆಯ ವಯಸ್ಸು |
|---|---|---|---|
| ಜಿಯಪ್ಪಗೌಡ | ೧೩೪೨-೧೪೦೦ | ೧೩೧೫-೧೪೦೦ (೮೫) | ? |
| ಗಿಡ್ಡಪ್ಪ ಗೌಡ | ೧೪೦೦-೧೪೫೦? | ೧೩೫೫-೧೪೫೦ (೯೫) | ೪೦ |
| ನಾಚಪ್ಪ ಗೌಡ | ೧೪೫೦-೧೫೦೦? | ೧೪೦೦-೧೫೦೦ (೧೦೦) | ೪೫ |
| ಕೆಂಪನಾಚಪ್ಪ | ೧೫೦೦-೧೫೩೧? | ೧೪೪೫-೧೫೩೧ (೮೬) | ೪೫ |
| ಹಿರಿಯ ಕೆಂಪೇಗೌಡ | ೧೫೩೧-೧೬೦೮? | ೧೫೦೦-೧೬೦೮ (೧೦೮) | ೫೫ |
| ಇಮ್ಮಡಿ ಕೆಂಪೇಗೌಡ | ೧೫೯೭-೧೬೫೬ | ೧೫೫೦-೧೬೫೬ (೧೦೬) | ೫೦ |
| ಮುಮ್ಮಡಿ ಕೆಂಪೇಗೌಡ | ೧೬೫೬-೧೬೮೧ | ೧೬೦೦-೧೬೮೧ (೮೧) | ೫೦ |
| ದೊಡ್ಡ ವೀರಪ್ಪ | ೧೬೮೧-೧೬೯೭ | ೧೬೩೦-೧೬೯೭ (೬೭) | ೩೦ |
| ಕೆಂಪ ವೀರಪ್ಪ | ೧೬೯೭-೧೭೧೬ | ೧೬೬೦-೧೭೧೬ (೫೬) | ೩೦ |

? ಈ ಪ್ರಶ್ನಾರ್ಥಕ ಚಿಹ್ನೆ ಕರ್ಲಮಂಗಲಂ ಅವರದ್ದೇ.

ಈ ಎಣಿಕೆಯಲ್ಲಿನ ಅನುಮಾನಗಳು/ಸಂದೇಹಗಳು/ಅಸಂಗತಗಳು :

### *೧) ಜಿಯಪ್ಪ ಗೌಡನ ಕಾಲ :*

ಕ್ರಿ.ಶ. ೧೩೪೨ರ ಶಾಸನ, ಬೆಂಗಳೂರು ಸಂ ೨೪ ರಂತೆ ಈ ಕಾಲದಲ್ಲಿ ಬಯಿರೆದೇವ, ಮಾಚಿದೇವ, ಕಂನಗೌಡ, ಮಾರಗೌಡ, ತಾಯಿರೆವ ಇವರುಗಳು ಯಲಹಂಕದಲ್ಲಿ ನಾಡಪ್ರಭುಗಳಾಗಿದ್ದರು.

ಕ್ರಿ.ಶ. ೧೩೪೩ರ ಶಾಸನ, ಬೆಂಗಳೂರು ಸಂ ೨೩ರಂತೆ ಈ ಕಾಲದಲ್ಲಿ ಚಿಕ್ಕ ಭೈರೇದೇವ ಮತ್ತು ಮಾರನಾಯ್ಕ ನಾಡಪ್ರಭುಗಳಾಗಿದ್ದರು.

ಕ್ರಿ.ಶ. ೧೩೬೭ರ ಹೊಸಕೋಟೆಯ ಶಾಸನದಲ್ಲಿ 'ಎಲಹಂಕ ನಾಡಪ್ರಭು (ಭೈ)ರಿದೇವ' ಎಂಬುದನ್ನು ರಣಭೈರೇಗೌಡನಿಗೆ ಆರೋಪಿಸಿದ್ದಾರೆ.

ಆದ್ದರಿಂದ ೧೩೪೨ ರಿಂದ ಜಿಯಪ್ಪ ಗೌಡನ ಆಡಳಿತವಿದ್ದುದು ಅಸಂಭವ. ಜಯಗೌಡನು ಆವತಿಯಿಂದ ಯಲಹಂಕಕ್ಕೆ ಕ್ರಿ.ಶ ೧೪೧೮ ರಲ್ಲಿ ಬಂದನೆಂದೂ, ಸುತ್ತಮುತ್ತಲಿನ ಪಾಳೆಯಗಾರರನ್ನು ಸದೆಬಡಿದು ವಿಜಯನಗರದ ರಾಜ ಪ್ರೌಢ ದೇವರಾಯನಿಗೆ ಸಾಮಂತನಾದನೆಂದೂ ತಿಳಿದು ಬರುತ್ತದೆ. ಆ ನಂತರ ಕ್ರಿ.ಶ. ೧೪೨೦ರ ಸುಮಾರಿನಲ್ಲಿ ವಿಜಯನಗರದ ಅರಸರು ಜಯಗೌಡನಿಗೆ 'ಯಲಹಂಕ ಭೂಪಾಲ' ಎಂದು ಕರೆದಿದ್ದರಿಂದ ಅವನ ಆಡಳಿತ ೧೪೦೦ಕ್ಕೆ ಮುಗಿದಿರಲಾರದು, ೧೪೨೦ರ ಸುಮಾರಿನಲ್ಲಿ ಶುರುವಾಗಿರಬೇಕು.

೨)ಆಯಸ್ಸು : ನಾಚಪ್ಪ, ಹಿರಿಯ ಕೆಂಪೇಗೌಡ ಮತ್ತು ಇಮ್ಮಡಿ ಕೆಂಪೇಗೌಡ ಇವರ ಆಯಸ್ಸು ನೂರಕ್ಕೂ ಹೆಚ್ಚು. ನಾಚಪ್ಪನಿಂದ-ಮುಮ್ಮಡಿಯವರೆಗೆ ವಂಶದ ಐವರು ಹುಟ್ಟಿದ್ದು ಅವರವರ ತಂದೆಯ ವಯಸ್ಸು ೪೫ ಮೀರಿದ ಮೇಲೆಯೇ. ಇದು ಅಸಾಧ್ಯವಲ್ಲದಿದ್ದರೂ ನಂಬಲು ಕಷ್ಟ.

೩) ಕ್ರಿ.ಶ. ೧೬೦೮ ಶಾಸನ : ಶಿವಗಂಗೆಯ ಗಂಗಾಧರೇಶ್ವರ ದೇವಾಲಯದಲ್ಲಿನ ಪ್ರತಿಮೆ ಪೀಠದಲ್ಲಿರುವ ಕ್ರಿ.ಶ. ೧೬೦೮ ರ ಶಾಸನದಲ್ಲಿ ' ಕೆಂಪಯ ಗೌಡನು ಗಂಗಾಧರ ಸ್ವಾಮಿಯ ಪಾದಕೆ ಸದಾ ನಮಸ್ಕಾರ' ಎಂದು ಬರೆದಿದೆ. ಇದಕ್ಕೂ ಮೊದಲಿನ ೧೫೯೭, ೧೬೦೫, ೧೬೦೬ರ ಮೂರು ದಾನಪತ್ರ/ಶಾಸನಗಳು ಇಮ್ಮಡಿ ಕೆಂಪೇಗೌಡನದ್ದಾಗಿವೆ. ಆದ್ದರಿಂದ ೧೬೦೮ ರ ಶಾಸನವನ್ನು ಸ್ಮಾರಕವೆಂದು ಡಾ|| ಎಚ್. ಎಸ್. ಗೋಪಾಲರಾವ್ ಪರಿಗಣಿಸಿರುವುದು ಸಮಂಜಸವಾಗಿ ಕಾಣುತ್ತದೆ.

೪) 'ವೀರಭದ್ರ ವಿಜಯ' : ಈ ಗ್ರಂಥದ ಪ್ರಕಾರ ಕ್ರಿ.ಶ. ೧೬೪೮ ರಲ್ಲಿ ಮುಮ್ಮಡಿ ಕೆಂಪೇಗೌಡನು ಕಂಠೀರವ ನರಸರಾಜರೊಡನೆ ಯುದ್ಧ ಮಾಡಿದನು. ಮೇಲೆ ತೋರಿದ ಕಾಲಮಾನದಂತೆ ಆಗ ಇಮ್ಮಡಿಗೆ ೯೮ ವರ್ಷ. ಆ ವಯಸ್ಸಿನಲ್ಲಿ ಯುದ್ಧ ಮಾಡಿರುವುದು ಅಸಂಭವವೇ. ಆದ್ದರಿಂದ ವೀರಭದ್ರ ವಿಜಯದಲ್ಲಿ ಕೊಟ್ಟಂತೆ ಕ್ರಿ.ಶ. ೧೬೪೮ ಮುಮ್ಮಡಿಯ ಆಳ್ವಿಕೆಯ ಕಾಲವಾಗಿರಬೇಕು.

೭) ಕೆಂಪವೀರಪ್ಪಗೌಡನ ಆಳ್ವಿಕೆಯ ಕಾಲ :ಕರ್ಲಮಂಗಲಂ ಅವರೇ ತಮ್ಮ ಪುಸ್ತಕದಲ್ಲಿ ಹೇಳುವಂತೆ ಕೆಂಪವೀರಪ್ಪಗೌಡನು ಕ್ರಿ.ಶ. ೧೭೧೪ ರಲ್ಲಿ ಮೈಸೂರಿನ ಅರಸ ಒಂದನೆಯ ಕೃಷ್ಣರಾಜನಿಗೆ ಸೋತು ಅವನ ಅಧೀನನೆಂದು ಒಪ್ಪಿಕೊಂಡನು. ಆದರೆ ೧೭೧೫ ರಲ್ಲಿ ಮತ್ತೆ ಸ್ವತಂತ್ರನಾಗಿ ಕ್ರಿ.ಶ. ೧೭೩೦ರ ವರೆಗೂ ಆಳಿದನೆಂದು ತಿಳಿಯುತ್ತದೆ. ಕಡೆಗೆ ಕ್ರಿ.ಶ. ೧೭೩೦ ರಲ್ಲಿ ಕಳಲೆ ದೇವರಾಜಯ್ಯನೊಡನೆ ನಡೆದ ಯುದ್ಧದಲ್ಲಿ ಸಂಪೂರ್ಣವಾಗಿ ಸೋತು ಶ್ರೀರಂಗಪಟ್ಟಣದ ಸೆರೆಯಲ್ಲಿ ಅಸುನೀಗಿದನು. ಅಲ್ಲಿಗೆ ಯಲಹಂಕ ವಂಶದ ಆಳ್ವಿಕೆ

ಮುಕ್ತಾಯವಾಯಿತು. ಆದ್ದರಿಂದ ಅವನ ಆಳ್ವಿಕೆಯು ಕ್ರಿ.ಶ. ೧೭೧೬ ಕ್ಕೇ ಮುಗಿಯಿತೆಂದು ತೋರಿಸುವ ಕಾರಣವಿಲ್ಲ.

ಬೆಂಗಳೂರು ಗೆಜೆಟಿಯರ್ (೧೯೯೦) ಯಲಹಂಕ ನಾಡಪ್ರಭುಗಳ ವಂಶಾವಳಿ ಮತ್ತು ಆಳ್ವಿಕೆಯ ಕಾಲವನ್ನು ಈ ಕೆಳಗಿನಂತೆ ಕೊಡುತ್ತದೆ. ಅದರಿಂದ ಪ್ರತಿಯೊಬ್ಬರ ಜೀವಿತಕಾಲ ಮತ್ತು ಅವರು ಹುಟ್ಟಿದಾಗ ತಂದೆಯ ವಯಸ್ಸು ಏನಾಗಿದ್ದೀತೆಂದು ಈ ಕೆಳಕಂಡಂತೆ ಎಣಿಕೆಮಾಡಬಹುದು :

| ಹೆಸರು | ಆಡಳಿತ ಕಾಲ | ಜೀವಿತ ಕಾಲ (ವರ್ಷ) | ಹುಟ್ಟಿದಾಗ ತಂದೆಯ ವಯಸ್ಸು |
|---|---|---|---|
| ಬೈರೇಗೌಡ | ೧೩೬೭ | ? | ? |
| ಜಿಯಪ್ಪಗೌಡ | ೧೪೨೦-೧೪೫೦ | ೧೩೫೫-೧೪೫೦ (೯೫) | ೩೫ |
| ............. | ? | ? | ? |
| ಕೆಂಪನಂಜೇಗೌಡ | ೧೪೮೦-೧೫೧೫ | ೧೪೫೫-೧೫೧೦ (೫೫) | ೩೫ |
| ಕೆಂಪೇಗೌಡ | ೧೫೧೦-೧೫೭೦ | ೧೪೯೦-೧೫೭೦ (೮೦) | ೩೫ |
| ಗಿಡ್ಡೇಗೌಡ | ೧೫೭೦-೧೫೮೫ | ೧೫೧೫-೧೫೮೫ (೮೦) | ೨೫(ಕೆಂಪೇಗೌಡನ ಮಗ) |
| ಇಮ್ಮಡಿ ಕೆಂಪೇಗೌಡ | ೧೫೮೫-೧೬೩೩ | ೧೫೩೫-೧೬೩೩ (೯೮) | ೪೫(ಕೆಂಪೇಗೌಡನ ಮಗ) |
| ಮುಮ್ಮಡಿ ಕೆಂಪೇಗೌಡ | ೧೬೩೩-೧೬೭೮ | ೧೫೮೦-೧೬೭೮ (೯೮) | ೪೫ |
| ದೊಡ್ಡವೀರಪ್ಪ | ೧೬೭೮-೧೭೧೦ | ೧೬೨೦-೧೭೧೦ (೯೦) | ೪೦ |
| ಕೆಂಪವೀರಪ್ಪ | ೧೭೧೦-೧೭೨೮ | ೧೬೫೦-೧೭೨೮ (೭೮) | ೩೦ |

ಈ ಎಣಿಕೆಯಲ್ಲಿನ ಅನುಮಾನಗಳು / ಸಂದೇಹಗಳು / ಅಸಂಗತಗಳು :

**೧) ಜಿಯಪ್ಪ ಗೌಡನ ಮೊದಲು :** ಮೇಲೆ ಹೇಳಿದಂತೆ ಬಯಿರೆದೇವ / ಬೈರೇಗೌಡನ ಹೆಸರು ಕ್ರಿ.ಶ. ೧೩೪೨ ಮತ್ತು ಕ್ರಿ.ಶ. ೧೩೬೭ರ ಶಾಸನಗಳಲ್ಲೂ ಬರುತ್ತದೆ. ಅವನ ಆಡಳಿತ ಕಾಲವನ್ನು ಇಲ್ಲಿ ತೋರಿಸಿಲ್ಲ. ಪ್ರಚಲಿತ ಕಥೆಯಂತೆ ಬೈರೇಗೌಡ ಅವನ ಸಹೋದರರು ಮತ್ತು ಮೂರು ಮಕ್ಕಳೊಂದಿಗೆ ಆವತಿಗೆ ಬಂದಾಗ ಅವನ ಮಗಳಿಗೆ ಸುಮಾರು ಹನ್ನೆರಡು-ಹದಿನೈದು ವರ್ಷ ಹಾಗೂ ಅವನಿಗೇ ಸುಮಾರು ನಲವತ್ತು ವರ್ಷವಾದರೂ ಆಗಿದ್ದಿರಬೇಕು. ಕ್ರಿ.ಶ. ೧೩೬೭ ರಲ್ಲಿ ಅವನ ಆಡಳಿತ ಶುರುವಾಯಿತೆಂದುಕೊಂಡರೆ,

ಅವನು ೧೩೨೭ ರಲ್ಲಿ ಹುಟ್ಟಿರಬೇಕು. ಆವತಿ ತಲುಪಿದ್ದು ೧೩೬೦ ಅಂದರೆ ಜಯಗೌಡ ಅದಕ್ಕೆ ಮೊದಲೇ ೧೩೫೫ರ ಸುಮಾರಿನಲ್ಲೋ ಇನ್ನೂ ಮುಂಚೆಯೋ ಹುಟ್ಟಿರಬೇಕು.

**೨. ಜಿಯಪ್ಪ ಗೌಡನ ಸಂತತಿ :** ಜಿಯಪ್ಪನು ಭೈರೇಗೌಡನ ನೇರ ಸಂತತಿಯವನಾಗಿದ್ದರೆ ಖಂಡಿತವಾಗಿಯೂ ಭೈರೇಗೌಡನ ಹೆಸರು ಸುಬ್ರಹ್ಮಣ್ಯದ ದಾನಶಾಸನದ ವಂಶಾವಳಿಯಲ್ಲಿ ಸೇರಿರುತ್ತಿತ್ತು. ಭೈರೇಗೌಡನು ವಂಶದ ಮೂಲನೆಂದು ಅವನ ಹೆಸರನ್ನು ಇಲ್ಲಿ ಸೇರಿಸಿದ್ದುದಾದರೆ, ಜಿಯಪ್ಪನ ನೇರ ಸಂತತಿಯ ಗಿಡ್ಡಪ್ಪ ಮತ್ತು ನಾಚಪ್ಪ ಗೌಡ ಇವರನ್ನು ಯಾಕೆ ಬಿಟ್ಟರೋ ಗೊತ್ತಾಗುವುದಿಲ್ಲ.

**೩) ಕೆಂಪನಂಜೇಗೌಡ :** ಜಿಯಪ್ಪನು ಹುಟ್ಟಿದ್ದು, ಮೇಲೆ ತೋರಿಸಿದಂತೆ, ಕ್ರಿ.ಶ. ೧೩೫೫ ಅಂದರೆ ಅಲ್ಲಿಂದ ಮೂರನೆಯ ತಲೆಯಾದ ಕೆಂಪನಂಜೇಗೌಡ ಹುಟ್ಟಿದ್ದು ೧೦೦ ವರ್ಷಗಳ ನಂತರ ಅನ್ನಬಹುದು. ಹಾಗಾದರೆ ಕೆಂಪನಂಜೇಗೌಡ ಹುಟ್ಟಿದ್ದು ೧೪೫೫ ಎಂದಾಗುತ್ತದೆ.

**೪) ಗಿಡ್ಡೇಗೌಡ :** ಕೆಂಪೇಗೌಡನ ನಂತರ ಗಿಡ್ಡೇಗೌಡನ ಹೆಸರು ಸುಬ್ರಹ್ಮಣ್ಯದ ದಾನಶಾಸನದ ವಂಶಾವಳಿಯಲ್ಲಿ ಬರುವುದಿಲ್ಲ. ಈ ಹೆಸರನ್ನು ಸಾಹಿತ್ಯಿಕ ಮೂಲಗಳಿಂದ ಪಡೆದಿದೆ ಅನ್ನುತ್ತಾರೆ. ಗೆಜೆಟಿಯರ್‌ನ ಸಂಪಾದಕರು, ಆ ಮೂಲವನ್ನು ತಿಳಿಸಿಲ್ಲ.

**೫) ವಯಸ್ಸು :** ಇಮ್ಮಡಿ, ಮುಮ್ಮಡಿ ಮತ್ತು ದೊಡ್ಡವೀರಪ್ಪ ಗೌಡರುಗಳ ವಯಸ್ಸು ಹಾಗೂ ಅವರು ಹುಟ್ಟಿದಾಗ ಅವರ ತಂದೆಯ ವಯಸ್ಸನ್ನು ನೋಡಿದಾಗ ಅದು ಅಸಾಧ್ಯವಲ್ಲ ಅನಿಸಿದರೂ, ಮೊದಲ ಮಗ ಅಷ್ಟು ತಡವಾಗಿ ಹುಟ್ಟಿರುವುದು ಅಸಂಭವ ಅನ್ನಿಸುತ್ತದೆ.

**೬) ಹಿರಿಯ ಕೆಂಪೇಗೌಡನ ಶಾಸನ :** ಕೆಂಪೇಗೌಡನ ಹೆಸರಿನ ಕೊನೆಯ ಶಾಸನಗಳಲ್ಲಿ ಕುಣಿಗಲು ಸಂ ೨೩ (ಹೊಸೂರು ಗ್ರಾಮದ ವೆಂಕಟನ ಹೊಲದಲ್ಲಿದ್ದ ಶಿಲಾಶಾಸನ) ಮತ್ತು ನೆಲಮಂಗಲ ಸಂ ೧೦೯ (ಗಂಗಾಧರಸ್ವಾಮಿಗೆ ಸಮರ್ಪಿಸಿದ ಘಂಟೆಯ ಮೇಲಿನ ಬರಹ) ಇವು ಮುಖ್ಯ. ಕುಣಿಗಲು ಶಾಸನದ ಕಾಲ ಕ್ರಿ.ಶ. ೧೫೮೫. ನೆಲಮಂಗಲ ಶಾಸನದ ಕಾಲವನ್ನು ೧೫೭೮/೧೫೮೮ ಎಂದು ಹೇಳುತ್ತಾರೆ. ಆದರೆ ಮೇಲಿನ ಯಾದಿಯಲ್ಲಿ ಹಿರಿಯ ಕೆಂಪೇಗೌಡನ ಕಾಲ ೧೫೭೦ ರಲ್ಲೇ ಮುಗಿದಿದೆ.

**೭) ಇಮ್ಮಡಿ ಕೆಂಪೇಗೌಡನ ಕಾಲ :** ಇಮ್ಮಡಿಯ ಕಾಲ ಇಲ್ಲಿಯ ಪ್ರಕಾರ ಕ್ರಿ.ಶ. ೧೬೩೩ ರಲ್ಲಿ ಮುಗಿದಿದೆ. ಹೊನ್ನಪ್ಪಗೌಡನನ್ನು ಹುಲಿಕಲ್ಲು/ಭೈರವ ದುರ್ಗಗಳ ದೊರೆಯಾಗಿ ಇಮ್ಮಡಿ ನೇಮಿಸಿದ್ದು ಕ್ರಿ.ಶ. ೧೬೩೪ ರಲ್ಲಿ.

'ಜಯಪ್ರಶಸ್ತಿ'ಯ ಪ್ರಕಾರ ಇಮ್ಮಡಿ ವೆಂಕಟಪತಿಯನ್ನು ಇಮ್ಮಡಿ ರಕ್ಷಿಸಿದ್ದು ೧೬೩೫ ರಲ್ಲಿ. ರಣದುಲ್ಲಾಖಾನ್ ಮತ್ತು ಷಹಜಿ ಬೆಂಗಳೂರನ್ನು ಆಕ್ರಮಿಸಿಇಮ್ಮಡಿಯನ್ನು ಸೋಲಿಸಿದ್ದು ಕ್ರಿ.ಶ. ೧೬೩೮ ರಲ್ಲಿ. ಗೆಜೆಟಿಯರ್ ಪ್ರಕಾರ ರಣದುಲ್ಲಖಾನ್ ಯುದ್ಧಕ್ಕೆ ಬಂದದ್ದು ಮುಮ್ಮಡಿಯ ಕಾಲದಲ್ಲಿ ಎನ್ನುವುದು ಪ್ರಚಲಿತ ಐತಿಹ್ಯಗಳಗೆ ವಿರುದ್ಧವಾಗಿದೆ. ಮುಮ್ಮಡಿ ಆ ಕಾಲದಲ್ಲಿ ಇರಲಿಲ್ಲವೆಂದಲ್ಲ; ಆಗ ಮುಮ್ಮಡಿ ಮಾಗಡಿಯಲ್ಲಿದ್ದ.

ಹೇಳಿದ್ದೆಲ್ಲವನ್ನೂ ಅನುಮಾನ, ಸಂದೇಹದಿಂದಲೇ ನೋಡಿ ಅಸಂಗತವನ್ನೇ ತೋರಿಸುತ್ತಿದ್ದರೆ ಪರಿಹಾರವೇನಾದರು ಇದೆಯೋ ಎಂಬ ಪ್ರಶ್ನೆ ಬರುವುದು ಸ್ವಾಭಾವಿಕ. ಹಲವು ಶತಮಾನಗಳ ಹಿಂದೆ ನಡೆದಿರಬಹುದಾದ್ದನ್ನು ಹೀಗೇ ನಡೆದಿರಬಹುದು ಎಂದು ಊಹಿಸವುದಾಗಲೀ ಎಣಿಕೆಮಾಡುವುದಾಗಲೀ ಸುಲಭ ಸಾಧ್ಯವಲ್ಲ. ಆದರೆ ಈಗ ಲಭ್ಯವಿರುವ ಶಾಸನಗಳು, ದಾನ ಪತ್ರಗಳು, ಐತಿಹ್ಯಗಳು, ಪುರಾವೆಗಳು, ದಂತ ಕಥೆಗಳು, ಪ್ರಚಲಿತ ಅನಿಸಿಕೆಗಳು ಇವನ್ನು ಸಾಕಷ್ಟುಮಟ್ಟಿಗೆ ಅಳವಡಿಸಿಕೊಂಡ ಒಂದು ಎಣಿಕೆಯನ್ನು ವಿದ್ವಾಂಸರ ಮುಂದಿಡಬಹುದು. ಆ ಎಣಿಕೆ ಈ ಕೆಳಕಂಡಂತಿದೆ :

| ಹೆಸರು | ಆಡಳಿತ ಕಾಲ | ಜೀವಿತ ಕಾಲ (ವರ್ಷ) | ಹುಟ್ಟಿದಾಗ ತಂದೆಯ ವಯಸ್ಸು |
|---|---|---|---|
| ಜಿಯಪ್ಪ | ೧೪೨೦-೧೪೬೦ | ೧೩೯೦-೧೪೬೦ (೭೦) | ? |
| ಗಿಡ್ಡಪ್ಪ | ೧೪೬೦-೧೪೯೦ | ೧೪೨೦-೧೪೯೦ (೭೦) | ೩೦ |
| ನಾಚಪ್ಪ | ೧೪೯೦-೧೫೧೦ | ೧೪೫೦-೧೫೧೦ (೬೦) | ೩೦ |
| ಕೆಂಪನಾಚಪ್ಪ | ೧೫೧೦-೧೫೨೯ | ೧೪೭೫-೧೫೨೯ (೫೪) | ೨೫ |
| ಹಿರಿಯ ಕೆಂಪೇಗೌಡ | ೧೫೨೯-೧೫೯೫ | ೧೫೦೫-೧೫೯೭ (೯೨) | ೩೦ |
| ಇಮ್ಮಡಿ ಕೆಂಪೇಗೌಡ | ೧೫೯೭-೧೬೪೦ | ೧೫೫೦-೧೬೪೦ (೯೦) | ೪೫ |
| ಮುಮ್ಮಡಿ ಕೆಂಪೇಗೌಡ (ಮಾಗಡಿಯಲ್ಲಿ) | ೧೬೨೩-೧೬೭೫ | ೧೫೮೫-೧೬೭೫ (೯೦) | ೩೫ |
| ದೊಡ್ಡ ವೀರಪ್ಪ | ೧೬೭೫-೧೬೯೬ | ೧೬೧೫-೧೬೯೬ (೮೧) | ೩೦ |
| ಕೆಂಪವೀರಪ್ಪ | ೧೬೯೬-೧೭೩೦ | ೧೬೪೫-೧೭೩೦ (೯೦) | ೩೦ |

ಮೇಲಿನ ಎಣಿಕೆಗೆ ಆಧಾರಗಳು ಇಂತಿವೆ : (ಕೆಳಗೆ ಕಂಸದಲ್ಲಿ ಕೊಟ್ಟಿರುವುದು ಜೀವಿತ ಕಾಲ)

**೧) ಜಿಯಪ್ಪ (೧೩೯೦-೧೪೬೦) :** ಜಯಗೌಡನು ಆವತಿಯಿಂದ ಯಲಹಂಕಕ್ಕೆ ಕ್ರಿ.ಶ. ೧೪೧೮ ರಲ್ಲಿ ಬಂದನೆಂದೂ, ಸುತ್ತಮುತ್ತಲಿನ ಪಾಳೆಯಗಾರರನ್ನು ಸದೆಬಡಿದು ವಿಜಯನಗರದ ರಾಜ ಪ್ರೌಢ ದೇವರಾಯನಿಗೆ ಸಾಮಂತನಾದನೆಂದೂ ತಿಳಿದುಬರುತ್ತದೆ. ಆ ನಂತರ ಕ್ರಿ.ಶ. ೧೪೨೦ ರ ಸುಮಾರಿನಲ್ಲಿ ವಿಜಯನಗರದ ಅರಸರು ಜಯಗೌಡನಿಗೆ 'ಯಲಹಂಕ ಭೂಪಾಲ' ಎಂದು ಕರೆದಿದ್ದರೆಂದು ಪ್ರತೀತಿ.

**೨) ಜಿಯಪ್ಪ (ಜಯಗೌಡ), ಗಿಡ್ಡಪ್ಪ, ನಾಚಪ್ಪ ಮತ್ತು ಕೆಂಪನಾಚಪ್ಪ (೧೩೯೦-೧೫೨೯):** ಇವರ ಹೆಸರಿನಲ್ಲಿ ಯಾವ ಶಾಸನಗಳೂ ಇದ್ದಂತಿಲ್ಲ.

**೩) ಹಿರಿಯ ಕೆಂಪೇಗೌಡ (೧೫೦೫-೧೫೯೭) :** ಕ್ರಿ.ಶ. ೧೫೦೯ ರಲ್ಲಿ ಕೃಷ್ಣದೇವರಾಯ ವಿಜಯನಗರದ ಚಕ್ರವರ್ತಿಯಾದಾಗ ಅನೇಕ ಪಾಳೆಯಗಾರರು, ಸಾಮಂತರು ತಾವು ಸ್ವತಂತ್ರರೆಂದು ಘೋಷಿಸಿದರು. ಈ ಸಂದಿಗ್ಧ ಸಮಯದಲ್ಲಿ ಬಂಡೆದ್ದವರನ್ನು

ಹತ್ತೋಟಿಗೆ ತರುವುದರಲ್ಲಿ ಯಲಹಂಕ ನಾಡುಪ್ರಭುವಿನ (ಕೆಂಪನಾಚೇಗೌಡನ) ಪಾತ್ರವಿತ್ತು. ಕ್ರಿ.ಶ. ೧೫೧೫ ರಲ್ಲಿ ಕೃಷ್ಣದೇವರಾಯ ಮೊದಲ ಸಲ ವಿಜಯದಶಮಿ ಉತ್ಸವ ಏರ್ಪಡಿಸಿದಾಗ ತಂದೆಯ ಜೊತೆಗೆ ಬಾಲಕ ಕೆಂಪೇಗೌಡನೂ ವಿಜಯನಗರಕ್ಕೆ ಹೋಗಿದ್ದನೆಂದು ಹೇಳಿಕೆ.

ಹಿರಿಯ ಕೆಂಪೇಗೌಡನ ಹೆಸರಿನಲ್ಲಿರುವ ಮೊದಲ ಶಾಸನ ಬೆಂಗಳೂರು ಸಂ ೫೨. ಇದರ ಕಾಲ ಕ್ರಿ.ಶ. ೧೫೩೧/೧೫೩೨. ಕೆಂಪದೇವರಸನು ಸ್ವಾಮಿ ಅಚ್ಯುತರಾಯರಿಗೆ ಧರ್ಮವಾಗಲೆಂದು ಶಿವನಸಮುದ್ರದ ಚೊಕ್ಕನಹಳ್ಳಿಯನ್ನು ದಾನಮಾಡಿದುದನ್ನು ತಿಳಿಸುತ್ತದೆ. ಅಚ್ಯುತರಾಯನು (೧೫೨೯-೧೫೪೨) ಕೆಂಪೇಗೌಡನಿಗೆ ಹನ್ನೆರಡು ಹೋಬಳಿಗಳ ವರಮಾನವನ್ನು ಕೊಟ್ಟನೆಂದು ಬಂದಿದೆ. ಆದ್ದರಿಂದ ಇವನ ಆಡಳಿತವೂ ಸುಮಾರು ಕ್ರಿ.ಶ. ೧೫೨೯-೧೫೩೧ ರಲ್ಲಿ ಆರಂಭವಾಗಿರಬೇಕು. ಕೆಂಪೇಗೌಡನ ಹೆಸರಿನ ಕೊನೆಯ ಶಾಸನ ನೆಲಮಂಗಲ=ಸಂ ೧೦೯. ಶಿವಗಂಗೆಯ ಗಂಗಾಧರ ದೇವಾಲಯಕ್ಕೆ ಘಂಟೆಯನ್ನು ಸಮರ್ಪಿಸಿದ ವಿಚಾರ ತಿಳಿಸುತ್ತದೆ. ಇದರ ಕಾಲ ವಿದ್ವಾಂಸರ ಪ್ರಕಾರ ಕ್ರಿ.ಶ. ೧೫೭೮/೧೫೮೮. ಕ್ರಿ.ಶ. ೧೬೦೮ ರ ಶಿವಗಂಗೆಯ ಗಂಗಾಧರೇಶ್ವರ ದೇವಾಲಯದಲ್ಲಿನ ಪ್ರತಿಮೆಯನ್ನು ಈ ಮೊದಲು ಹೇಳಿದಂತೆ ಸ್ಮಾರಕವೆಂದು ಪರಿಗಣಿಸಿದರೆ, ಅದರ ಪೀಠದಲ್ಲಿ 'ಕೆಂಪಯ ಗೌಡನು ಗಂಗಾಧರ ಸ್ವಾಮಿಯ ಪಾದಕೆ ಸದಾ ನಮಸ್ಕಾರ' ಎಂದು ಬರೆದಿರುವ ಶಾಸನವನ್ನು (ನೆಲಮಂಗಲ ಸಂ ೧೦೭) ತಂದೆಯ ಗೌರವದಲ್ಲಿ ಇಮ್ಮಡಿಯು ಬರೆಸಿದ ಶಾಸನವೆನ್ನಬಹುದು. ಹಾಗಾದರೆ ಕ್ರಿ.ಶ. ೧೫೮೮ ರ ಶಾಸನವೇ ಕೆಂಪೇಗೌಡ ಬರೆಸಿದ ಕೊನೆಯ ಶಾಸನ.

**೪) ಇಮ್ಮಡಿ ಕೆಂಪೇಗೌಡ (೧೫೫೦-೧೬೪೦) :** ಇವನ ಮೊದಲ ಶಾಸನ ಕ್ರಿ.ಶ. ೧೫೯೭ ರಲ್ಲಿ ವೇದಟ್ಲ ಅನಂತ ಭಟ್ಟರಿಗೆ ಬೆಂಗಳೂರಿನ ಪೌರೋಹಿತ್ಯ ವಹಿಸಿಕೊಟ್ಟ ದಾನಪತ್ರ. ಇವನ ಕಾಲದ ದಾನಶಾಸನಗಳು ಕ್ರಿ.ಶ.೧೫೯೭ ರಿಂದ ೧೬೩೧ ರವರೆಗೂ ಇವೆ. ಗುಜ್ಜರಿ ವಿಶ್ವನಾಥನು ಕಟ್ಟಿಸಿದ ಧರ್ಮಶಾಲೆಯ ವಿಚಾರ ತಿಳಿಸುವ ಕ್ರಿ.ಶ. ೧೬೩೩ ರ ತೆಲುಗು ಶಾಸನದಲ್ಲಿ ಇಮ್ಮಡಿಯನ್ನು ಯಲಹಂಕ ನಾಡಪ್ರಭುವೆಂದು ಗೌರವದಿಂದ ನೆನೆಸಿದೆ.

ಶಾಸನಗಳೇ ಅಲ್ಲದೆ ಇತರ ಐತಿಹ್ಯಗಳೂ ಇಮ್ಮಡಿ ಕೆಂಪೇಗೌಡನನ್ನು ನೆನೆಸುತ್ತವೆ. ಇಮ್ಮಡಿಯು ತನ್ನ ಶಾಸನದ ಹದಿನೈದನೆಯ ವರ್ಷದಲ್ಲಿ ಜಗದೇವರಾಯ ಮೊದಲಾದ ಪಾಳೆಯಗಾರರನ್ನು ಬಗ್ಗುಬಡೆದ ಕಥೆಯನ್ನು 'ಜಯಪ್ರಶಸ್ತಿ' ವಿವರಿಸುತ್ತದೆ. ಅಲ್ಲಿ ಕೊಟ್ಟಿರುವ ಶಕ ವರ್ಷ ೧೫೩೪ ಅಥವಾ ಕ್ರಿ.ಶ.೧೬೧೨. ಮೇಲೆ ತೋರಿಸಿರುವ ಎಣಿಕೆಯ ಪ್ರಕಾರವೂ ೧೬೧೨ಕ್ಕೆ ಇವನ ಆಳ್ವಿಕೆಯ ಹದಿನೈದು ವರ್ಷಗಳಾಗುತ್ತವೆ. ಹೊನ್ನಪ್ಪಗೌಡನನ್ನು ಹುಲಿಕಲ್ಲು/ಭೈರವ ದುರ್ಗಗಳ ದೊರೆಯಾಗಿ ಇಮ್ಮಡಿ ನೇಮಿಸಿದ್ದು ಕ್ರಿ.ಶ. ೧೬೩೪ ರಲ್ಲಿ; 'ಜಯಪ್ರಶಸ್ತಿ'ಯ ಪ್ರಕಾರ ಇಮ್ಮಡಿ ವೆಂಕಟಪತಿಯನ್ನು ಇಮ್ಮಡಿ ರಕ್ಷಿಸಿದ್ದು ೧೬೩೪/೧೬೩೫ ರಲ್ಲಿ; ರಣದುಲ್ಲಾಖಾನ್ ಮತ್ತು ಷಹಜಿ ಬೆಂಗಳೂರನ್ನು ಆಕ್ರಮಿಸಿ ಇಮ್ಮಡಿಯನ್ನು ಸೋಲಿಸಿದ್ದು

ಕ್ರಿ.ಶ. ೧೬೩೮ ರಲ್ಲಿ-ಎಂಬ ಸಾಹಿತ್ಯಾಧಾರ ಮತ್ತು ಪ್ರಚಲಿತ ಕಥೆಗಳನ್ನು ಅಲ್ಲಗಳೆಯುವಂತಿಲ್ಲ. 'ಕಂಠೀರವ ನರಸರಾಜ ವಿಜಯ' ದಲ್ಲೂ ರಣದುಲ್ಲಾಖಾನನ ಧಾಳಿಯಲ್ಲಿ 'ಕೆಂಪೇಗೌಡ'ನು ಸೋತು ಓಡಿದ ವಿವರ ಬರುತ್ತದೆ-ಇಮ್ಮಡಿಯೋ ಮುಮ್ಮಡಿಯೊ ತಿಳಿಯುವುದಿಲ್ಲ.

ಇಮ್ಮಡಿ ಕೆಂಪೇಗೌಡನು ಕ್ರಿ.ಶ. ೧೬೨೩ ರಲ್ಲಿ ಮಾಗಡಿ, ಸಾವನದುರ್ಗವನ್ನು ಗೆದ್ದು, ಮುಮ್ಮಡಿಯನ್ನು ಮಾಗಡಿಯಲ್ಲಿ ಪ್ರತಿಷ್ಠಾಪಿಸಿದನೆಂದು ಪ್ರತೀತಿ. ಬೆಂಗಳೂರಿನಲ್ಲೇ ಉಳಿದ ಇಮ್ಮಡಿಯನ್ನು ಕ್ರಿ.ಶ. ೧೬೩೮ ರಲ್ಲಿ ರಣದುಲ್ಲಾಖಾನ್ ಸೋಲಿಸಿದ ಮೇಲೆ ಮಾಗಡಿಗೆ ಬಂದು ನೆಲೆಸಿ ಅಲ್ಲೇ ಮೃತನಾಗಿರಬಹುದು.

**೫) ಮುಮ್ಮಡಿ ಕೆಂಪೇಗೌಡ (೧೫೮೫-೧೬೭೫) :** ಇವನ ಹೆಸರಿನ ಮೊದಲ ದಾನಪತ್ರ ಕ್ರಿ.ಶ. ೧೬೫೬ ರಲ್ಲಿ ಶೇಷಯ್ಯಂಗಾರರಿಗೆ ಶ್ರೀನಿವಾಸಪುರವನ್ನು ದಾನ ಮಾಡದ್ದನ್ನು ತಿಳಿಸುತ್ತದೆ. ಕೊನೆಯ ದಾನ ಶಾಸನ ಕ್ರಿ.ಶ. ೧೬೭೪ ರಲ್ಲಿ ಕೆಂಪಸಾಗರ ಅಗ್ರಹಾರವನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ.

**೬) ದೊಡ್ಡವೀರಪ್ಪ (೧೬೧೫-೧೬೯೬) :** ಇವನ ಕಾಲದ ಶಾಸನಗಳು ಕ್ರಿ.ಶ. ೧೬೮೧ ಮತ್ತು ೧೬೮೪ಕ್ಕೆ ಸೇರಿದವು. ಕ್ರಿ.ಶ. ೧೬೮೪ರ ಶಾಸನಗಳು ಶೃಂಗೇರಿ ಮಠಕ್ಕೆ ಶೀಗೇಕುಪ್ಪೆ ಮತ್ತು ಸುಬ್ರಹ್ಮಣ್ಯಸ್ವಾಮಿಗೆ ಅರಬೇಡರ ಹಳ್ಳಿಯನ್ನು ದಾನ ಮಾಡಿದ್ದನ್ನು ತಿಳಿಸುತ್ತವೆ.

**೭) ಕೆಂಪವೀರಪ್ಪಗೌಡ (೧೬೪೫-೧೭೩೦) :** ಇವನ ಶಾಸನಗಳು ಕ್ರಿ.ಶ. ೧೬೯೭ ರಿಂದ ೧೭೧೫ ರವರೆಗೂ ಕಂಡುಬರುತ್ತವೆ. ಇವನ ಕಾಲದ ಅತಿ ಮುಖ್ಯ ಶಾಸನವೆಂದರೆ ಕ್ರಿ.ಶ. ೧೬೯೮ ರಲ್ಲಿ ಮಂಗಳೂರು ಜಿಲ್ಲೆ ಸುಬ್ರಹ್ಮಣ್ಯ ದೇವಾಲಯಕ್ಕಾಗಿ (ಮಾಗಡಿ ಹತ್ತಿರದ) 'ಸುಬ್ಬರಾಯ ಬೇಡರ ಹಳ್ಳಿ'ಯನ್ನು ದಾನವಾಗಿ ಕೊಡುವಾಗ ಬರೆಸಿದ ಶಾಸನ. ಈ ಶಾಸನದಿಂದಲೇ ನಮಗೆ ಈ ವಂಶಾವಳಿಯ ವಿವರಗಳು ಸಿಗುವುದು. ಕೆಂಪವೀರಪ್ಪಗೌಡನು ಕ್ರಿ.ಶ. ೧೭೧೪ ರಲ್ಲಿ ಮೈಸೂರಿನ ಅರಸ ಒಂದನೆಯ ಕೃಷ್ಣರಾಜನಿಗೆ ಸೋತು ಅವನ ಅಧೀನನೆಂದು ಒಪ್ಪಿಕೊಂಡನು. ಆದರೆ ೧೭೧೫ ರಲ್ಲಿ ಮತ್ತೆ ಸ್ವತಂತ್ರನಾಗಿ ಕ್ರಿ.ಶ. ೧೭೩೦ರ ವರೆಗೂ ಆಳಿದನೆಂದು ತಿಳಿಯುತ್ತದೆ. ಕಡೆಗೆ ಕ್ರಿ.ಶ. ೧೭೩೦ ರಲ್ಲಿ ಕಳಲೆ ದೇವರಾಜಯ್ಯನೊಡನೆ ನಡೆದ ಯುದ್ಧದಲ್ಲಿ ಸಂಪೂರ್ಣವಾಗಿ ಸೋತು ಶ್ರೀರಂಗಪಟ್ಟಣದ ಸೆರೆಯಲ್ಲಿ ಅಸು ನೀಗಿದನು. ಅಲ್ಲಿಗೆ ಯಲಹಂಕ ವಂಶದ ಆಳ್ವಿಕೆ ಮುಕ್ತಾಯವಾಯಿತು.

ಈ ಮೇಲಿನ ವಿಶ್ಲೇಷಣೆಯಿಂದ ಬೆಂಗಳೂರು ಕೆಂಪೇಗೌಡನ ಆಳ್ವಿಕೆಯ ಕಾಲವನ್ನು ಕ್ರಿ.ಶ. ೧೫೨೯ ರಿಂದ ಕ್ರಿ.ಶ. ೧೫೯೫ ಅಂತಲೂ, ಅವನ ಜೀವಿತ ಕಾಲವನ್ನು ಕ್ರಿ.ಶ. ೧೫೦೫ ರಿಂದ ಕ್ರಿ.ಶ. ೧೫೯೭ ಅಂತಲೂ ಹೇಳಬಹುದಾಗಿದೆ.

* * *

# ತುಟಿ'ಲ್, ತುಡು, ತು(ಳು)ಬು

*-ಡಾ|| ಉಪ್ಪಂಗಳ ರಾಮಭಟ್ಟ*

'ತುಟಿ'ಲ್, ತುಟಿ'ಲ್‌ಗೆಯ್, ತುಟಿ'ಲಾಳ್, ತೊಟ್ಟು, ತೊಟ್ಟುವೆಸನ' ಶಬ್ದಗಳು ಹಳಗನ್ನಡ ಕಾವ್ಯಗಳಲ್ಲಿ ಸಾಮಾನ್ಯವಾಗಿವೆ-'ರಣಕ್ಕೆ ತುಟಿ'ಲಾಳ್' (ಗದಾಯುದ್ಧ ದರ್ಪಣ-ಪ್ರೊ|| ಪಿ. ಸುಬ್ರಾಯ ಭಟ್ಟ, ಆಶ್ವಾಸ ೫, ಪದ್ಯ ೩೫, ಪುಟ ೨೦೧) ಈ ಶಬ್ದಗಳಿಗೆ ಕ್ರಮವಾಗಿ ಸೇವೆ, ಸೇವೆಮಾಡು, ಸೇವಕ, ಸೇವೆಯ ಕೆಲಸ ಎಂಬರ್ಥಗಳಿವೆ. 'ತೊಟ್ಟು' ಎಂದರೆ ಗುಲಾಮ ಎಂಬ ರೀತಿಯ ಹೀನಾರ್ಥವನ್ನೂ ಬಿಂಬಿಸುತ್ತದೆ. ನಡುಗನ್ನಡ ಹೊಸಗನ್ನಡಗಳಲ್ಲಿ ಇದು ಸಜಾತೀಯ ದ್ವಿತ್ವವಾಗಿ 'ತೊತ್ತು' ಎಂದಾಗಿದೆ. ('ಅನ್ಯರ ಮನೆಯಲಿ ತೊತ್ತಾಗಿರ್ದು'-ಹರಿಶ್ಚಂದ್ರ ಕಾವ್ಯ) 'ತುಟಿ'ಲ್' ಮೂಲದ್ರಾವಿಡ ಶಬ್ದವಾಗಿದ್ದು ಮಲಯಾಳ ತಮಿಳುಗಳಲ್ಲೂ ಈಗಲೂ ಪ್ರಯೋಗದಲ್ಲಿದೆ. ಅದರ ಪೂರ್ವಸ್ವರ ವ್ಯತ್ಯಯದಿಂದ 'ಒ' ಕಾರವಾಗಿ (Mutation of vowel) 'ತೊಟಿ'ಲ್' 'ತೊಟ್ಟು' 'ತೊತ್ತು' ಎಂದಾಗುವುದು. ಮಲಯಾಳದಲ್ಲಿ ಕಾರ್ಮಿಕ ಎಂಬರ್ಥದಲ್ಲಿ ತೊಟಿ'ಲಾಳಿ (ಮೊದಲಾಳಿ (ಧನಿ) ಮಲಯಾಳಿ ಎಂಬಂತೆ) ಶಬ್ದವಿದೆ. ಇದೇ ಹಳಗನ್ನಡದಲ್ಲಿ 'ತುಟಿ'ಲಾಳ್'. 'ತುಟಿ'ಲ್' ಶಬ್ದಕ್ಕೆ ನಮಸ್ಕಾರ, 'ತುಟಿ'ಲ್‌ಗೆಯ್' ಎಂದರೆ ನಮಸ್ಕರಿಸು ಎಂಬರ್ಥವೂ ಪ್ರಾಚೀನ ಕಾಲದಲ್ಲಿತ್ತು. ಮಹಾರಾಜರ, ದೊಡ್ಡ ಜಮೀನ್ದಾರರ ಕಾಲದಲ್ಲಿ, ವಿನಯದಿಂದ ಉದ್ದಂಡ ಬಿದ್ದು ಕಾಲು ಮುಟ್ಟಿ ನಮಸ್ಕರಿಸುವವರೇ ಅವರ ಸೇವೆ, ಕೆಲಸ ಮಾಡುವವರು. ಈ ಕಾಲಿಗೆ ಬಿದ್ದು ಮುಟ್ಟಿ 'ತ್ವಮೇವ ಶರಣಂ' ಎಂಬಷ್ಟು ವಿನಯಶೀಲನಾದವನಿಗೇ ಸೇವೆಯ, ವಿಶ್ವಾಸದ ಅರ್ಹತೆ. ಆದ್ದರಿಂದ ಸೇವಾ ಪೂರ್ವದ ವಂದನೆಯೇ 'ಸೇವೆ' ಎಂಬ ಅರ್ಥವನ್ನೂ ಮುಂದೆ ಪಡೆದಿರಬೇಕು. ನಮಸ್ಕರಿಸು ಎಂಬರ್ಥದಲ್ಲಿ 'ತುಟಿ'ಲ್‌ಗೆಯ್' ಎಂಬ ಪ್ರಯೋಗ ಹಳಗನ್ನಡದಲ್ಲಿದೆ. ಮಲಯಾಳದಲ್ಲೂ 'ತೊಟುನ್ನು' ಅಂದರೆ ಅದೇ ಅರ್ಥ. 'ಞಾನ್ ತೊಟುನ್ನೇನ್' (ನಾನು ವಂದಿಸುತ್ತೇನೆ) ಎಂಬುದು ಹಳೆಯ ಪ್ರಯೋಗ. (ಉದಾ : 'ಪೈದಲೇ ಕೈ ತೊಟುನ್ನೇನ್') ಇತ್ತೀಚೆಗಿನ ವರೆಗೂ ಹಳ್ಳಿಗಳಲ್ಲಿ ಅತ್ಯಂತ ಕೆಳವರ್ಗದವರು, ಮೇಲಿನವರ್ಗದವರನ್ನು ಕಂಡೊಡನೆ 'ಉಳ್ಳಾಯ ಅಡ್ಡಬೂರ್ತೆ' (ಒಡೆಯ, ಅಡ್ಡಬಿದ್ದೆ) ಎನ್ನುವ ಕ್ರಮ. ಉನ್ನತ ವರ್ಗದಲ್ಲೂ ಹಿರಿಯರ ಕಾಲನ್ನು ಹಿಡಿದು ಕಿರಿಯರು ವಂದಿಸುವುದಕ್ಕೆ 'ಕಾಲು ಹಿಡಿ'ಯುವುದು ಎಂದೇ ಹೇಳುತ್ತೇವೆ. ಇದು ಅತ್ಯಂತ ವಿನಯದ, ಸಜ್ಜನಿಕೆಯ ಲಕ್ಷಣವಾಗಿತ್ತು. ಅಪರಾಧಿಯು ತಪ್ಪೊಪ್ಪಿಕೊಂಡರೆ ಅದನ್ನು ತೋರಿಸುವ, ಕ್ಷಮೆ ಕೇಳುವ ಮೊದಲ ಕ್ರಮವಿದು. ಕಾರ್ಯಜಾಣರು ಕಾರ್ಯಸಾಧಿಸುವುದಕ್ಕಾಗಿ ಈ ಅತಿವಿನಯವನ್ನು ತೋರಿಸುವುದುಂಟು. ದೇವರಿಗೆ, ಹಿರಿಯರಿಗೆ ಹೀಗೆ ಉದ್ದಂಡ ನಮಸ್ಕಾರ ಮಾಡುವ, ಕಾಲು ಹಿಡಿಯುವ ಈ ನಡತೆ ಉತ್ತಮ ಸಂಸ್ಕೃತಿಯಾಗಿ ನಡೆದು ಬಂದಿತ್ತು. ವಿಚಾರವಾದಿಗಳು ಇದನ್ನು ಊಳಿಗ ಪದ್ಧತಿ (Feudalistic) ಎಂದು ಹೀಗಳೆಯಲು, ಅದು ತನ್ನ ಅರ್ಥವನ್ನು ಕಳೆದುಕೊಂಡುದೇ ಕಾರಣವಿರಲೂಬಹುದು. ಬ್ರಿಟಿಷರ ಕಾಲದಲ್ಲೂ ಕೆಳಗಣ ಸ್ಥಾನವದವನು ಮೇಲಿನವನನ್ನು ಸೆಲ್ಯೂಟ್ (Salute) ಮಾಡಿ ಶುಭ ಹೇಳುವುದು (Wishing good) ರೂಢಿಯಲ್ಲಿತ್ತು. ತೊಟ್ಟುಟ್ಟಿ, ತೊತ್ತಿನಮಗ (ಬೈಗಳು). ಪೋಲೀಸ್, ಸೈನ್ಯ

ಮೊದಲಾದ ಇಲಾಖೆಗಳಲ್ಲಿ ಇದು ಶಿಸ್ತಿನ ಕ್ರಮವೇ ಆಗಿದ್ದು, ಸ್ವತಂತ್ರ ಭಾರತದಲ್ಲೂ ಈ ಕ್ರಮ ನಡೆಯುತ್ತಲೇ ಇದೆ.

ಮುಂದೆ ಈ ವಿನಯ ಅತಿಯಾಯಿತೆಂದೋ, ಸ್ವಾಭಿಮಾನಕ್ಕೆ ಭಂಗವೆಂದೋ ಇದರ ಸುಧಾರಿತ ರೂಪ 'ಕೈಮುಗಿಯುವುದು' ಸರಳ ಸುಲಭ ಕ್ರಿಯೆಯಾಗಿ ರೂಢಿಯಾಯಿತು.ಇದು ಇನ್ನೂ ಸರಳ, ಹ್ರಸ್ವವಾಗಿ ಕೇವಲ ಬಲಗೈಯನ್ನು ಮೇಲೆತ್ತಿ ಆಂದೋಳಿಸುವ (wave) ಕ್ರಮ, ಮತ್ತೆ ಕೇವಲ ಮುಖ ನೋಡಿ ಮುಗುಳ್ನಗು ಮಾತ್ರವಾಗಿದೆ.

ನಮಸ್ಕಾರದ ಮೂಲ ವಿಧಾನವೇ ('ತುಟಿಲ್‌ಗೆಯ್') ಸೇವೆ ಎಂಬರ್ಥದ ಪರ್ಯಾಯ ಪದವಾಗಿರುವುದನ್ನು ನೋಡಿದರೆ, ಶಬ್ದರೂಪಗಳು, ಅವುಗಳ ಅರ್ಥಗಳು ಕಾಲದಿಂದ ಕಾಲಕ್ಕೆ ಬದಲಾಗುವುದು ಅದ್ಭುತವೆನಿಸುತ್ತದೆ. 'ತುಟಿಲ್' ಶಬ್ದದಲ್ಲಿ ಒಂದು ಶಬ್ದ, ಇನ್ನೊಂದು ಕೃತ್ ಪ್ರತ್ಯಯವಿದ್ದಂತೆ ತೋರುತ್ತದೆ.-ತುಡು+ಇಲ್ ಎಂದಿರಬಹುದೆ ? ಧಾತುವಿಗೆ ಅಲ್, ಇಲ್,ಲ್ ಸೇರಿದರೆ ಅದು ಕೃದಂತನಾಮವಾಗುತ್ತದೆ. ಉದಾ-ಸಿಡಿ-ಇಲ್-ಸಿಡಿಲ್ ಮೆಟ್ಟು-ಅಲ್-ಮೆಟ್ಟಲ್, ಇದೇ ರೀತಿ ಮಾಡಲ್, ಕಾವಲ್, ಮುಗಿಲ್ ಮೊದಲಾದ ಅನೇಕ ಶಬ್ದಗಳಿವೆ. ತುಳುವಿನಲ್ಲಿ ಅಲ್-ಎಲ್ ಆಗುತ್ತದೆ-ಬಿಕ್ಕೆಲ್. (ಒಕ್ಕಲು) ಚುಳ್ಳೆಲ್ (ಮದುವೆ), ತೆಡಿಲ್ ಇತ್ಯಾದಿ. ಮಲಯಾಳದಲ್ಲೂ ಈ ಪ್ರಯೋಗವಿದೆ-ತುಳ್ಳಲ್, ನೋಕ್ಕಲ್ ಇತ್ಯಾದಿ. (ಈ ಕುರಿತು ಈ ಲೇಖಕನ 'ಅಲ್' ಪ್ರತ್ಯಯ-'ಕವಿಮಾರ್ಗ' ಪುಟ ೧೬೮ ರಲ್ಲಿ ನೋಡಬಹುದು.) 'ಮಾಡಲಾಯಿತು' ಎಂಬಲ್ಲಿ ಮಾಡು-ಅಲ್ (ಮಾಡುವುದು) ಆಯಿತು ಎಂದೇ ಅರ್ಥ. ಇದರಿಂದಲೇ ಕರ್ಮಣಿ ಪ್ರಯೋಗವೂ ಸಿದ್ಧವಾಗುತ್ತದೆ. ಪೇಟಿಲ್ (ಹೇಳುವುದನ್ನು) ಪಡೆಗುಂ-ಪಡೆಯುವುದು. ಈ ವಿಶ್ಲೇಷಣೆಯನ್ನು ಪೂಜ್ಯ ಪಂಡಿತವರ್ಯ ರಂಗನಾಥಶರ್ಮರೂ ಒಪ್ಪಿದ್ದರು.

'ತುಡು' ಎಂಬುದಕ್ಕೆ ಮುಟ್ಟು, ಹಿಡಿ ಎಂಬರ್ಥವೇ. (ತುಡೆ ಕರ್ಣನದಂ) (ಪಂಪ ಭಾರತ-೨ನೇ ಭಾಗ, ಪದ್ಯ ೧೯೩, ಪುಟ ೩೫೭) ಮಲಯಾಳದಲ್ಲಿ ಇದು ಸ್ವರ ವ್ಯತ್ಯಯದಿಂದ 'ತೊಡು' ಎಂದಾಗುತ್ತದೆ. (ಉದಾ-ಎನ್ನ ತೊಡೆಂಡ-ನನ್ನನ್ನು ಮುಟ್ಟಬೇಡ-ತೊಡು+ಬೇಂಡ) ಇದರ ಅರ್ಥಛಾಯೆ ಸ್ವಲ್ಪ ವ್ಯತ್ಯಾಸವಾಗುವುದೂ ಉಂಟು.-ಅಲ್ಲಿಂದ ತೊಟ್ಟು (ಆರಂಭಿಸಿ), ಬಟ್ಟೆಯನ್ನು ಉಡು, ಅಂಗಿಯನ್ನು ತೊಡು-ಇದರ ನಾಮರೂಪ ಮಧ್ಯದೀರ್ಘವನ್ನು ಪಡೆದು 'ತೋಡು' ಎಂದೂ ಆಗಬಹುದು. "ನೂಲ ತೋಡಾಗದೆ ಕೆಟ್ಟುಪೋದ ವರನಿಂ ಮಗುಟ್ದಿಂ ನಿಜಿಪಂತು ಬೆಳ್ಪನೇ " (ಪಂಪ ಭಾರತ ಒಂಬತ್ತನೆಯ ಆಶ್ವಾಸ. ನಲವತ್ತಾರನೆಯ ಪದ್ಯ, ಪುಟ ೨೩೩-'ನೋಡಿ-ಪಂಪನ ಎರಡು ಪ್ರಯೋಗಗಳು' ಸಾಧನೆ-ಬೆಂಗಳೂರು ವಿ.ವಿ. ೧೯೮೯) 'ಅಗೆಯುವುದು' ಎಂಬರ್ಥದ ತೋಡು (ಬಾವಿ ತೋಡು) ಇನ್ನೊಂದು ಶಬ್ದ. ಪಾದವನ್ನು ಮುಟ್ಟಿ ನಮಸ್ಕರಿಸು-'ತುಡು' ಅಥವಾ ಎರಡು ಹಸ್ತಗಳೂ ಪರಸ್ಪರ ಮುಟ್ಟಿ ಅಂಜಲಿಬದ್ಧನಾಗುವುದೂ ಅದೇ ತಾನೇ, ವಿನಯದ, ವಿಧೇಯತನದ ಪ್ರತೀಕ. ಈ ಧಾತುವಿಗೆ ಇಲ್ ಪ್ರತ್ಯಯ ಸೇರಿ ಕೃದಂತನಾಮವಾಗುವಾಗ 'ಡ' ಕಾರವು ಹಳಗನ್ನಡದಲ್ಲಿ 'ಟ' ಕಾರವಾಗುತ್ತದೆ. ಕೋಡು+ಕುಟ್ಟು=ಕೋಟ್ಕುಟ್ಟು, ಬೀಡು+ಕೊಳ್=ಬೀಟ್ಕೊಳ್ ಮೊದಲಾದ ಕಡೆಗಳಲ್ಲಿ ಡ ಕಾರದ ಮುಂದೆ ವ್ಯಂಜನ ಬಂದಾಗ ಅದಕ್ಕೆ 'ಟ' ಕಾರಾದೇಶವಾಗುತ್ತದೆ ಎಂದು ವ್ಯಾಕರಣ

ಹೇಳುತ್ತದೆ. (ಶಬ್ದಮಣಿದರ್ಪಣ-ಪಂ|| ಡಿ. ಎಲ್. ನರಸಿಂಹಾಚಾರ್. ಸೂತ್ರ ೧೯೪, ಪುಟ ೧೯೧-೧೯೨).

ಇಲ್ಲಿ (ತುಡು+ಇಲ್) ಡ ಕಾರದ ಮುಂದೆ ಸ್ವರವಿರುವುದರಿಂದ 'ಟಿ'ಕಾರ ಬರಬಹುದೇ? ಬಹಳ ಅಪೂರ್ವವಾಗಿ ಇಂತಹ ಸಂಭವವೂ ಇದೆ ಎನ್ನಬಹುದು, ಆಲದ ಮರದ ಗೆಲ್ಲುಗಳಿಂದ ಇಳಿಯುವ ಬೇರನ್ನು 'ಬಿಟಿಲು' ಎನ್ನುತ್ತೇವೆ. ಇದು ಬಿಡು+ಅಲ್ (ಮರವನ್ನು ಬಿಟ್ಟು ಕೆಳಗೆ ಇಳಿಯುವುದು) ಏಕೆ ಆಗಿರಬಾರದು. ಇದೇ ರೀತಿ 'ಮಟಿಲ್' ಕನ್ನಡದ 'ಕೊಡು' ಬ್ರಾಹ್ಮಣರ ತುಳುವಿನಲ್ಲಿ 'ಕೊಟು' ಎಂದಾಗುತ್ತದೆ.

ಮಣಲ್ (ಮರಳು). 'ಕೊಟಿಲ್', 'ತೊಟಿಲ್' ಮೊದಲಾದ ಅತ್ಯಲ್ಪ ಸಂಖ್ಯೆಯ ಶಬ್ದಗಳನ್ನು ಗುರುತಿಸಬಹುದು. 'ತುಟಿ'-ಕಾಲಿಂದ ಮುಟ್ಟುವುದು ಅಥವಾ ಒದೆಯುವುದು ಇದೇ ಮೂಲದ ಶಬ್ದವಾಗಿದ್ದು ಸ್ವಲ್ಪ ಅರ್ಥ ಛಾಯೆಯನ್ನು ವಿಶೇಷವಾಗಿಸಿಕೊಂಡಿದೆ. ಬಹುಶಃ ಈ ಮೂಲದ ಇನ್ನೊಂದು ಶಬ್ದ ತು (ಟ್) ಳ್-ಕುಣಿಯುವುದು. ಮಲಯಾಳದಲ್ಲಿ ತುಟಿಲ್ (ಕುಣಿತ, ನಾಮಪದ)-ಓಟ್ಟಂ ತುಟಿಲ್, (ನೃತ್ಯ) ಕಾಲು ನೆಲ ಮುಟ್ಟಿ ಚಲಿಸುವ ಕ್ರಿಯೆ, ಬೇರೊಂದು ಅರ್ಥಛಾಯೆಯನ್ನು ಪಡೆದಿರಬಹುದೆ ?

ಆದಿವಾಸಿಗಳಾದ, ಹಿಂದುಳಿದ ವರ್ಗದ ತುಳುವರು ಅವರ ಮದುವೆ (ಚುಳ್ಳಿಲ್)ಗಳಲ್ಲಿ ದುಡಿಬಾರಿಸುತ್ತಾ ಕುಣಿದು ಆನಂದಪಡುತ್ತಾರೆ. ವಿರಾಮದಲ್ಲಿ, ವಿನೋದವಾಗಿಯೂ ಅವರು ಹೀಗೆ ಕುಣಿಯುವುದುಂಟು. ಹೀಗೆ ಸಂತೋಷದಿಂದ 'ತುಳ್ಳು'ವುದೇ (ಕುಣಿಯುವುದು) ಮದುವೆಯಲ್ಲಿ ಅವರಿಗೆ ವಿಶೇಷವಾದ್ದರಿಂದಲೇ ಮದುವೆಯನ್ನು ಅವರು ತುಳ್ಳಿಲ್-'ಚುಳ್ಳಿಲ್' ಎಂದು ಕರೆದಿರಬಹುದೆ ? ಉದಾ-ತೀರು, ಸೀರು, ಚೀರು (ಸಾಧ್ಯ) ತಿನ್, ಸಿನ್, ಚಿನ್ (ತಿನ್ನು) ತುಳುವಿನಲ್ಲಿ 'ತ' ಕಾರ 'ಚ' ಕಾರ ವಾಗುವುದಿದೆ. ಅಥವಾ ಅವರ ಚಕಾರವೇ ಇತರರಲ್ಲಿ ತಕಾರವಾಯಿತೇನೋ. ದಿ. ಡಾ|| ಶಿವರಾಮ ಕಾರಂತರು 'ಚೋಮನ ದುಡಿ' ಎಂಬ ಅವರ ಕಾದಂಬರಿಯಲ್ಲಿ ಹೊಲೆಯನಾದ ಚೋಮನ ದುಡಿ ಬಾರಿಸುವಿಕೆ ಮತ್ತು ಕುಣಿತವನ್ನು ಚಿತ್ರಿಸಿರುವುದನ್ನಿಲ್ಲಿ ನೆನೆಯಬಹುದು. ತು(ಳ್)ಟ್-ತುಳ್ಳುವ ಸಂಪ್ರದಾಯವಿರುವ ಈ ಜನರೇ ತುಳುವರು. ಇವರ ಈ ವಿಶೇಷವಾದ ಕ್ರಮವನ್ನು ನೋಡಿದ ಇತರರು ಅವರನ್ನು ಹಾಗೆ ಕರೆದಿರಬಹುದು. ಆದ್ದರಿಂಲೇ ಆ ಭಾಷೆಗೂ 'ತುಳು' ಎಂದು ಹೆಸರಾಗಿರಬಹುದು. (ನೋಡಿ : ಗಡಿನಾಡು-ಡಾ|| ಉಪ್ಪಂಗಳ ರಾಮಭಟ್ಟ, ಪುಟ ೨, ೧೯೯೪) ಆದಿವಾಸಿಗಳಲ್ಲಿ ಅವರದೇ ಆದ ಅಂತಹ ಕುಣಿತದ ಕ್ರಮ ಈಗಲೂ ಇದೆ. ಬೇರೆ ಕಡೆಯ ಆದಿವಾಸಿಗಳಿಗೂ ಈ ಸಂಪ್ರದಾಯವಿದೆ,[2] ತಮಿಳರ ದೊರೆಯೊಬ್ಬನು ನೀಲಗಿರಿಯನ್ನು ಹಾದುಹೋಗುವಾಗ ಕ್ರಿ.ಶ. ೨ನೆಯ ಶತಮಾನದ ಸೆಂಗುಟ್ಟವನ್ ಎಂಬ.

ಅಲ್ಲಿನ ಕನ್ನಡಿಗರ ಕುಣಿತವನ್ನು ನೋಡಿದ ಪ್ರಸಂಗವನ್ನು 'ಶಿಲಪ್ಪದಿಗಾರಮ್' ಗ್ರಂಥದಲ್ಲಿ ಹೇಳಲಾಗಿದೆ. (ರಾ. ಯ. ಧಾರವಾಡಕರ, ಕನ್ನಡ ಭಾಷಾಶಾಸ್ತ್ರ, ಪುಟ ೭೦) ನೀಲಗಿರಿಯ, ದ್ರಾವಿಡ ವರ್ಗಕ್ಕೆ ಸೇರಿದ ತೊಡ-ತೋಡ ಜನರ ಹೆಸರಿಗೂ 'ತುಳು' ವಿಗೂ ಏನಾದರೂ ಸಂಬಂಧವಿರಬಹುದೇ ? ಪರಿಶೀಲಿಸಬೇಕು, "ಶಬ್ದಪಾರಮಾರ್ಗಮಶಕ್ಯಂ"!

---

೧. ಕನ್ನಡದ 'ಕೊಡು' ಬ್ರಾಹ್ಮಣರ ತುಳುವಿನಲ್ಲಿ 'ಕೊಟು' ಎಂದಾಗುತ್ತದೆ.

೨. ಕ್ರಿ.ಶ. ೨ನೆಯ ಶತಮಾನದ ಸೆಂಗುಟ್ಟವನ್ ಎಂಬ.

# ಯರಗುಪ್ಪಿಯ ಕೇಶವ ದೇವಾಲಯ-

## ವಾಸ್ತು-ಶಿಲ್ಪ-ಶಾಸನ

**ಅಪ್ಪಣ್ಣನರಸಪ್ಪಾ ಹಂಜೆ**

ಧಾರವಾಡ ಜಿಲ್ಲೆಯ ತಾಲ್ಲೂಕು ಕೇಂದ್ರವಾದ ಕುಂದಗೋಳದಿಂದ ಈಶಾನ್ಯಕ್ಕೆ ಹತ್ತು ಕಿ.ಮೀ. ಅಂತರದಲ್ಲಿರುವ ಯರಗುಪ್ಪಿ ಗ್ರಾಮವು, ತನ್ನ ಮಡಿಲಿನಲ್ಲಿರುವ ಪ್ರಾಚೀನ ಕಾಲದ ಕೆಲವು ಅಪರೂಪದ ಪುರಾತತ್ವ ಅವಶೇಷಗಳಿಂದಾಗಿ, ಈ ತಾಲ್ಲೂಕಿನ ಸಾಂಸ್ಕೃತಿಕ ಇತಿಹಾಸದ ರಚನೆಯಲ್ಲಿ ಮಹತ್ವದ ಪಾತ್ರವಹಿಸಿದೆ. ಈ ಗ್ರಾಮದ ಮಧ್ಯಭಾಗದಲ್ಲಿ ಕಲ್ಯಾಣದ ಚಾಲುಕ್ಯರ ಆಳ್ವಿಕೆಯ ಕ್ರಿ.ಶ. ಸುಮಾರು ಹನ್ನೊಂದು-ಹನ್ನೆರಡನೆಯ ಶತಮಾನದ ಕಾಲದಲ್ಲಿ, ಉತ್ತರಾಭಿಮುಖವಾಗಿ ನಿರ್ಮಾಣವಾದ ಕೇಶವ ದೇವಾಲಯವಿದೆ. 'ಸ್ಥಳೀಯವಾಗಿ ನಾರಾಯಣ ದೇವಾಲಯ'ವೆಂದು ಕರೆಯಲ್ಪಡುತ್ತಿರುವ ಇದರ ಗರ್ಭಗೃಹದಲ್ಲಿರುವ ಮೂರ್ತಿಯನ್ನು 'ರೂಪಮಂಡನ' ಎಂಬ ಶಿಲ್ಪಶಾಸ್ತ್ರ ಕೃತಿಯಲ್ಲಿ ನಿರ್ದೇಶಿಸಲಾದ ಆಯುಧಗಳ ಪ್ರಕಾರ ಪರಿಶೀಲಿಸಲಾಗಿ, ಇದು ವಿಷ್ಣುವಿನ ಚತುರ್ವಿಂಶತಿ ಮೂರ್ತಿಗಳಲ್ಲಿ ಕೇಶವನ ಮೂರ್ತಿಯೆಂದು ಸ್ಪಷ್ಟವಾಯಿತು. ಹೀಗಾಗಿ ಪ್ರಸ್ತುತ ಲೇಖನದಲ್ಲಿ ಇದನ್ನು 'ಕೇಶವ ದೇವಾಲಯ'ವೆಂದು ಹೇಳಲಾಗಿದೆ. ಇಟ್ಟಿಗೆ, ಕಟ್ಟಿಗೆ, ಮಣ್ಣು ಮತ್ತು ಕಪ್ಪುಶಿಲೆಗಳನ್ನು ಬಳಸಿಕೊಂಡು ನಿರ್ಮಿಸಲ್ಪಟ್ಟ ಈ ದೇವಾಲಯದ ಚೌಕಾಕಾರವಾದ ತಲವಿನ್ಯಾಸವು ಗರ್ಭಗೃಹ, ತೆರೆದ ಅಂತರಾಳ, ನವರಂಗ ಮತ್ತು ತೆರೆದ ಮುಖಮಂಟಪಗಳಿಂದ ಕೂಡಿದೆ.

ಗರ್ಭಗೃಹದ ನಾಲ್ಕೂ ಮೂಲೆಗಳಲ್ಲಿ ನಾಲ್ಕು ಭಿತ್ತಿಗಂಬಗಳಿವೆ. ಕಾಲಾಂತರದಲ್ಲಿ ಈ ಭಿತ್ತಿಗಳ ಜೀರ್ಣೋದ್ಧಾರದ ಸಂದರ್ಭದಲ್ಲಿ ಮತ್ತೆ ಚಿಕ್ಕ ಚಿಕ್ಕ ಎರಡೆರಡು ಒಟ್ಟು ಆರು ಅರ್ಧಗಂಬಗಳನ್ನು ನಿಲ್ಲಿಸಲಾಗಿದೆ. ವಿತಾನದ ಮಧ್ಯಭಾಗದಲ್ಲಿ ಪದ್ಮಮಂಡಲದ ಅಲಂಕಾರವಿದೆ. ದ್ವಾರಬಂಧವು ಚತುಃಶಾಖಾ ರೀತಿಯಲ್ಲಿದ್ದು, ಇದರಲ್ಲಿ ಸ್ತಂಭಶಾಖೆಯು ಪ್ರಧಾನವಾಗಿದೆ. ಲಲಾಟ ಫಲಕದಲ್ಲಿ ಕೇಶವನ ಆಯುಧಗಳಲ್ಲೊಂದಾದ ಪದ್ಮದ ನಿರೂಪಣೆಯಿದೆ. ಉದುಂಬರಕ್ಕೆ ಹೊಂದಿಕೊಂಡಂತೆ ಮುಂಭಾಗದಲ್ಲಿ ಅರ್ಧಚಂದ್ರಾಕೃತಿಯ ಚಂದ್ರಶಿಲಾ ರಚನೆಯಿದೆ.

ಗರ್ಭಗೃಹಕ್ಕೆ ಹೊಂದಿಕೊಂಡಂತೆ ಮುಂಭಾಗದಲ್ಲಿರುವ ತೆರೆದ ಅಂತರಾಳದ ನಾಲ್ಕೂ ಮೂಲೆಗಳಲ್ಲಿ ನಾಲ್ಕು ಭಿತ್ತಿಗಂಬಗಳಿವೆ. ವಿತಾನವು ನಿರಲಂಕೃತವಾಗಿದೆ. ಈ ಅಂತರಾಳದ ಮುಂಭಾಗದಲ್ಲಿ ಎರಡು ಸ್ವತಂತ್ರ ರುದ್ರಕಾಂತ ಶೈಲಿಯ ಸ್ತಂಭಗಳ ಮೇಲ್ಭಾಗದಲ್ಲಿ ಮಕರತೋರಣ ಫಲಕವಿದ್ದು, ಇದರಲ್ಲಿ ಚತುರ್ಮುಖ ಬ್ರಹ್ಮ ಕೇಶವ ಮತ್ತು ಮಹೇಶ್ವರ ಇವರು ಆಯುಧಗಳ ಸಹಿತ ಸರ್ವಾಲಂಕೃತರಾಗಿ ಸಮಭಂಗಿಯಲ್ಲಿ ನಿಂತಿದ್ದಾರೆ. ಪಾದಪೀಠದಲ್ಲಿ ಇವರ ವಾಹನಗಳಾದ ಹಂಸ, ಗರುಡ ಮತ್ತು ನಂದಿ ಇವು ಆಸೀನವಾಗಿವೆ.

ಅಂತರಾಳಕ್ಕೆ ಹೊಂದಿಕೊಂಡಂತೆ ಮುಂಭಾದಲ್ಲಿರುವ ನವರಂಗದ ಮಧ್ಯದಲ್ಲಿ ನಾಲ್ಕು ಸ್ವತಂತ್ರ ರುದ್ರಕಾಂತ ಶೈಲಿಯ ಸ್ತಂಭಗಳಿದ್ದು,ಇವು ಕ್ರಮವಾಗಿ ಪೀಠ, ಪಾದ, ದಂಡ, ಕಲಶ, ತಾಟಿಕಾ, ಘಟ, ಮಂಡಿ, ಫಲಕ, ಗ್ರೀವ ಮತ್ತು ಬೋದಿಗೆಗಳಿಂದ ಕೂಡಿವೆ. ಕಾಲಾಂತರದಲ್ಲಿ ಈ ನಾಲ್ಕೂ ಸ್ತಂಭಗಳ ಮಧ್ಯಭಾಗದಲ್ಲಿ ವಿತಾನಕ್ಕೆ ಆಧಾರವಾಗಿ ಮತ್ತೆ ಚಿಕ್ಕ ಚಿಕ್ಕ ಎಂಟು ಶ್ರೀಕಾರ ಶೈಲಿಯ ಸ್ತಂಭಗಳನ್ನು ನಿಲ್ಲಿಸಲಾಗಿದೆ. ಮಧ್ಯದಲ್ಲಿರುವ ಈ

ನಾಲ್ಕೂ ಸ್ತಂಭಗಳಿಗೆ ಸಮಾನಾಂತರವಾಗಿ ಸುತ್ತಲೂ ಭಿತ್ತಿಗಳಲ್ಲಿ ಹನ್ನೆರಡು ಅರ್ಧಗಂಬಗಳಿವೆ. ವಿತಾನದ ಮಧ್ಯಭಾಗದ ಅಂಕಣದಲ್ಲಿ ಪದ್ಮಗಳನ್ನು ವೃತ್ತಾಕಾರದಲ್ಲಿ ಜೋಡಿಸಿದಂತೆ ಬಿಡಿಸಿರುವ ಪದ್ಮಮಂಡಲದ ಅಲಂಕರಣೆಯಿದೆ. ಸೂಕ್ಷ್ಮ ಕೆತ್ತನೆಗಳಿಂದ ಕಲಾತ್ಮಕವಾಗಿ ರಚಿಸಲ್ಪಟ್ಟ ಕಟ್ಟಿಗೆಯ ದ್ವಾರಬಂಧವು ತ್ರಿಶಾಖಾ ರೀತಿಯಲ್ಲಿದ್ದು, ಇದು ಕ್ರಮವಾಗಿ ರತ್ನ, ಪದ್ಮ ಮತ್ತು ವಲ್ಲಿ ಶಾಖೆಗಳಿಂದ ಕೂಡಿದೆ. ಲಲಾಟ ಫಲಕದಲ್ಲಿ ಗಣೇಶನು ಸುಖಾಸನದಲ್ಲಿ ಆಸೀನನಾಗಿದ್ದಾನೆ.

ನವರಂಗಕ್ಕೆ ಹೊಂದಿಕೊಂಡಂತೆ ಮುಂಭಾಗದಲ್ಲಿ ೧೯೩೩ ರಲ್ಲಿ ನಿರ್ಮಿಸಲ್ಪಟ್ಟ ತೆರೆದ ಮುಖಮಂಟಪವಿದೆ. ಸುತ್ತಲೂ ಮಣ್ಣಿನ ಇಟ್ಟಿಗೆಗಳ ಭಿತ್ತಿಗಳಿದ್ದು, ಮೇಲ್ಭಾಗದಲ್ಲಿ ಕಟ್ಟಿಗೆಯ ಮೇಲ್ಚಾವಣಿ (ಮಾಳಿಗೆ)ಯಿದೆ. ಇದಕ್ಕೆ ಆಧಾರವಾಗಿ ಚೌಕಾಕಾರದ ಕಟ್ಟಿಗೆಯ ಸ್ತಂಭಗಳನ್ನು ಅಳವಡಿಸಲಾಗಿದೆ.

ಈ ದೇವಾಲಯದ ಹೊರಗಿನ ಭಾಗಗಳು ಕಾಲದಿಂದ ಕಾಲಕ್ಕೆ ಜೀರ್ಣೋದ್ಧಾರಗೊಳ್ಳುತ್ತ ಬಂದಿವೆ. ಅಧಿಷ್ಠಾನ ಭಾಗವು ಕಂಡುಬರುವುದಿಲ್ಲ. ಭಿತ್ತಿಗಳು ಇಟ್ಟಿಗೆಗಳಿಂದ ನಿರ್ಮಿಸಲ್ಪಟ್ಟಿವೆ. ದೇವಾಲಯದ ಮೇಲ್ಭಾಗದಲ್ಲಿ ಶಿಖರವಿಲ್ಲ.

ಗರ್ಭಗೃಹದಲ್ಲಿ ಎರಡು ಅಡಿ ಎತ್ತರವಾದ ಪೀಠದ ಮೇಲೆ ಸುಮಾರು ನಾಲ್ಕು ಅಡಿ ಎತ್ತರ ಮತ್ತು ಎರಡು ಅಡಿ ಅಗಲವಾದ ವಿಷ್ಣುವಿನ ಚತುರ್ವಿಂಶತಿ ಮೂರ್ತಿಗಳಲ್ಲಿ ಕೇಶವನ ಸ್ಥಾನಕ ಶಿಲ್ಪವಿದೆ. ಕ್ರಿ.ಶ ಸುಮಾರು ಹನ್ನೆರಡನೆಯ ಶತಮಾನದ ಈ ಶಿಲ್ಪವು, ಕಪ್ಪು ಮಿಶ್ರಿತ ನೀಲಿ ಛಾಯೆಯ ಬಳಪದ ಶಿಲೆಯಲ್ಲಿ ಖಂಡರಿಸಲ್ಪಟ್ಟಿದೆ. ಸಮಪಾದ ಭಂಗಿಯಲ್ಲಿರುವ ಕೇಶವನು ಚತುರ್ಭುಜಧಾರಿಯಾಗಿದ್ದು, ಕೈಗಳಲ್ಲಿ ಕ್ರಮವಾಗಿ ಪದ್ಮ, ಶಂಖ, ಚಕ್ರ ಮತ್ತು ಗದೆಗಳಿವೆ. ಕರಂಡಮುಕುಟ, ಕರ್ಣಕುಂಡಲ, ಕಂಠಹಾರ, ಮಣಿಸರ, ಯಜ್ಞೋಪವೀತ, ಉದರಬಂಧ, ಕಟಿವಸ್ತ್ರ, ತೋಳ್ಬಂದಿ, ಕೈಗಡಗ, ಬೆರಳುಂಗುರ, ಕಾಲ್ಗಡಗ ಇತ್ಯಾದಿ ಆಭರಣಧಾರಿಯಾಗಿದ್ದಾನೆ. ಶಿರದ ಹಿಂಭಾಗದಲ್ಲಿ ಪ್ರಭಾಮಂಡಲವಿದ್ದು, ಕಾಲುಗಳ ಪಾರ್ಶ್ವಗಳಲ್ಲಿ ಶ್ರೀದೇವಿ ಮತ್ತು ಭೂದೇವಿ ಇವರು ಒಂದು ಕೈಯಲ್ಲಿ ಚಾಮರವನ್ನು ಹಿಡಿದು ಮತ್ತೊಂದು ಕೈಯನ್ನು ಕಟ್ಯವಲಂಬಿತ ರೀತಿಯಲ್ಲಿ ಇರಿಸಿಕೊಂಡು ದ್ವಿಭಂಗಿಯಲ್ಲಿ ನಿಂತಿದ್ದಾರೆ. ಪೀಠದಲ್ಲಿ ಕೇಶವನ ವಾಹನ ಮಾನವರೂಪಿ ಗರುಡನು ರೆಕ್ಕೆಗಳನ್ನು ಬಿಚ್ಚಿ ಸರ್ವಾಲಂಕೃತವಾಗಿ ಅಂಜಲಿ ಮುದ್ರೆಯಲ್ಲಿ ವೀರಾಸನದಲ್ಲಿ ಆಸೀನನಾಗಿದ್ದಾನೆ ಕೇಶವನ ಧ್ಯಾನಮುದ್ರೆಯ ಮುಖಭಾವ, ಹರವಾದ ಎದೆ, ಉದರ, ತೊಡೆ, ಮಣಿಕಟ್ಟುಗಳ ಉಬ್ಬು ತಗ್ಗುಗಳ ಮಾಟ, ಆಯುಧಗಳು ಮತ್ತು ಗರುಡನ ರೆಕ್ಕೆ ಹಾಗೂ ಭಕ್ತಿಯ ಹಾವಭಾವವನ್ನು ನೈಜವಾಗಿ ತೋರಿಸಲು ಶಿಲ್ಪಿಯ ಪ್ರಯತ್ನ ಯಶಸ್ವಿಯಾಗಿದೆ.

ಅಂತರಾಳದಲ್ಲಿ ಒಂದು ಅಡಿ ಎತ್ತರವಾದ ಪೀಠದ ಮೇಲೆ ಸುಮಾರು ಎರಡು ಅಡಿ ಐದು ಅಂಗುಲ ಎತ್ತರ ಮತ್ತು ಒಂದು ಅಡಿ ಐದು ಅಂಗುಲ ಅಗಲವಾದ ಸೂರ್ಯನ ಸ್ಥಾನಕ ಶಿಲ್ಪವಿದೆ. ಕ್ರಿ.ಶ. ಸುಮಾರು ಹನ್ನೆರಡನೆಯ ಶತಮಾನದ ಈ ಶಿಲ್ಪವು, ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಖಂಡರಿಸಲ್ಪಟ್ಟಿದೆ. ಸಮಪಾದ ಭಂಗಿಯಲ್ಲಿರುವ ಸೂರ್ಯನು ದ್ವಿಭುಜಧಾರಿಯಾಗಿದ್ದು, ಎರಡೂ ಕೈಗಳಲ್ಲಿ ಕಮಲದಳಗಳಿವೆ. ಕಿರೀಟಮುಕುಟ, ಕರ್ಣಕುಂಡಲ, ಕಂಠಹಾರ, ಮಣಿಸರ, ಯಜ್ಞೋಪವೀತ, ಉದರಬಂಧ, ಕಟಿವಸ್ತ್ರ ತೋಳ್ಬಂದಿ, ಕೈಗಡಗ, ಕಾಲ್ಗಡಗ ಇತ್ಯಾದಿ ಆಭರಣಧಾರಿಯಾಗಿದ್ದಾನೆ. ಕಾಲುಗಳ ಇಕ್ಕೆಲಗಳಲ್ಲಿ ಉಷಾ ಮತ್ತು ಪ್ರತ್ಯುಷಾ ಇವರು ಸಮಪಾದ ಭಂಗಿಯಲ್ಲಿ ನಿಂತಿದ್ದಾರೆ. ಪೀಠದಲ್ಲಿ ಓಡುತ್ತಿರುವ

ಏಳು ಕುದುರೆಗಳ ನಿರೂಪಣೆಯಿದೆ. ಶಿರದ ಹಿಂಭಾಗದಲ್ಲಿ ಪ್ರಭಾಮಂಡಲವಿದೆ. ಶಿಲ್ಪ ಫಲಕದ ಸುತ್ತಲೂ ಪ್ರಭಾವಳಿಯಲ್ಲಿ ಸೋಮ, ಮಂಗಳ, ಬುಧ, ಗುರು, ಶುಕ್ರ, ಶನಿ, ರಾಹು ಮತ್ತು ಕೇತು ಇವರು ಆಸೀನರಾಗಿದ್ದಾರೆ. ಈ ಶಿಲ್ಪದ ರೂಪ ಸಂಸ್ಕಾರ ಉತ್ತಮ ಮಟ್ಟದ್ದಾಗಿದ್ದರೂ ಪ್ರಮಾಣ ಮತ್ತು ಸಂಯೋಜನೆಗಳಲ್ಲಿ ಏನೋ ಕೊರತೆ ಕಾಣಿಸುತ್ತದೆ.

ಇದೇ ಸ್ಥಳದಲ್ಲಿ ಸುಮಾರು ಎರಡು ಅಡಿ ಐದು ಅಂಗುಲ ಎತ್ತರ ಮತ್ತು ಒಂದು ಅಡಿ ಅಗಲವಾದ ಗಣೇಶನ ಶಿಲ್ಪವಿದೆ. ಕ್ರಿ.ಶ. ಸುಮಾರು ಹನ್ನೆರಡನೆಯ ಶತಮಾನದ ಈ ಶಿಲ್ಪವು, ಕಪ್ಪು ಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಖಂಡರಿಸಲ್ಪಟ್ಟಿದೆ. ಸುಖಾಸನದಲ್ಲಿ ಆಸೀನನಾದ ಗಣೇಶನು ಚತುರ್ಭುಜಧಾರಿಯಾಗಿದ್ದು , ಕೈಗಳಲ್ಲಿ ಕ್ರಮವಾಗಿ ದಂತ, ಪರಶು, ಪದ್ಮ ಮತ್ತು ಮೋದಕಗಳಿವೆ. ಕಿರೀಟಮುಕುಟ, ಕಂಠಹಾರ, ಘಣೆಸರ, ತೋಳ್ಬಂದಿ, ಯಜ್ಞೋಪವೀತ, ಕಟಿವಸ್ತ್ರ, ಕೈಗಡಗ, ಕಾಲ್ಗಡಗ ಇತ್ಯಾದಿ ಆಭರಣಧಾರಿಯಾಗಿದ್ದಾನೆ. ಈ ಶಿಲ್ಪವು ಅಲ್ಲಲ್ಲಿ ತ್ರುಟಿತಗೊಂಡಿರುವುದರಿಂದ ಶಿಲ್ಪದ ಪ್ರತಿಮಾ ಲಕ್ಷಣ, ರೂಪ ಸಂಸ್ಕಾರ ಇತ್ಯಾದಿ ವಿವರಗಳು ಸ್ಪಷ್ಟವಾಗಿ ಗೋಚರಿಸುವುದಿಲ್ಲ.

ನವರಂಗದಲ್ಲಿ ಕ್ರಿ.ಶ. ಸುಮಾರು ಹನ್ನೆರಡು-ಹದಿಮೂರನೆಯ ಶತಮಾನದ ಶಿವಲಿಂಗವಿದೆ. ಸುಮಾರು ಎರಡು ಅಡಿ ಎತ್ತರವಾದ ಚೌಕಾಕಾರದ ಪಾಣಿಪೀಠದ ಮೇಲೆ ಒಂದು ಅಡಿ ಎತ್ತರವಾದ ವೃತ್ತಾಕಾರದ ಲಿಂಗವಿದೆ. ಇದರ ಮುಮ್ಮುಖದಲ್ಲಿ ಕೆಳಗಿನಿಂದ ಮಧ್ಯದವರೆಗೆ ಎರಡು ಸಮಾಂತರವಾದ ಲಂಬಕೋನ ರೇಖೆಗಳಿವೆ. ಈ ರೇಖೆಗಳ ಮಧ್ಯಭಾಗದಿಂದ ಪ್ರಾರಂಭವಾದ ಬ್ರಹ್ಮಸೂತ್ರವು ಬದಿಗಳಲ್ಲಿ ಸಮಾಂತರವಾಗಿ ಕೆಳಗಡೆ ಇಳಿದು ವಿಸ್ತರಿಸುತ್ತ ಲಿಂಗವನ್ನು ಉಡದಾರದಂತೆ ಸುತ್ತಿಕೊಂಡಿದೆ.

ಮುಖಮಂಟಪದ ಎಡಭಾಗದ ಭಿತ್ತಿಯಲ್ಲಿ ಕಪ್ಪು ಶಿಲೆಯಲ್ಲಿ ಖಂಡರಿಸಲ್ಪಟ್ಟ ನಲವತ್ತು ಪಂಕ್ತಿಗಳ ಶಾಸನವಿದೆ. ಕ್ರಿ.ಶ. ಹನ್ನೊಂದನೆಯ ಶತಮಾನದ ಕನ್ನಡ ಲಿಪಿಯಲ್ಲಿರುವ ಇದು ಕನ್ನಡ ಮತ್ತು ಸಂಸ್ಕೃತ ಮಿಶ್ರಭಾಷೆಯಲಿದ್ದು, ವೃತ್ತ ಮತ್ತು ಕಂದಗಳಲ್ಲಿ ರಚಿಸಲ್ಪಟ್ಟಿದೆ. ಇದು ಸೌತ್ ಇಂಡಿಯನ್ ಇನ್ಸ್‌ಕ್ರಿಪ್‌ಶನ್ಸ್ ಸಂಪುಟ ಹದಿನೆಂಟರಲ್ಲಿ (ಶಾಸನ ಸಂಖ್ಯೆ ೬೮, ಪು.೨ ಸಂಖ್ಯೆ ೫೮ ರಿಂದ ೬೦) ಪ್ರಕಟವಾಗಿದೆ. ಶಾಸನದ ಮೇಲ್ತುದಿಯಲ್ಲಿರುವ ಶಿಲ್ಪಪಟ್ಟಿಕೆಯಲ್ಲಿ ದೇವಾಲಯದ ಪ್ರತಿರೂಪದಂತಿರುವ ರಚನೆಯಲ್ಲಿ ಶಿವಲಿಂಗವಿದ್ದು, ಇದಕ್ಕೆ ಯತಿವರ್ೋನು ಪೂಜೆಗೈಯುತ್ತಿದ್ದಾನೆ. ಬಲಭಾಗದಲ್ಲಿ ನಂದಿ ಆಸೀನವಾಗಿದ್ದು, ಎಡಭಾಗದಲ್ಲಿ ಕಾಮಧೇನುವು ಕರುವಿಗೆ ಹಾಲುಣಿಸುತ್ತ ನಿಂತಿದೆ. ಮೇಲ್ಭಾಗದಲ್ಲಿ ಸೂರ್ಯ-ಚಂದ್ರರ ನಿರೂಪಣೆಗಳಿವೆ. ಪ್ರಸ್ತುತ ಶಾಸನದ ಸಂಕ್ಷಿಪ್ತ ಸಾರಾಂಶ ಈ ಕೆಳಗಿನಂತಿದೆ.

ಕಲ್ಯಾಣದ ಚಾಲುಕ್ಯ ಮನೆತನದ ಒಂದನೆಯ ಸೋಮೇಶ್ವರನ (ಕ್ರಿ.ಶ. ೧೦೪೨-೧೦೬೮) ಮಹಾಮಂಡಲೇಶ್ವರನಾದ ಮಾದರಸನು ಎರಡರನೂರು (ಪುಲಿಗೆರೆ ಮೂನ್ನೂರು ಮತ್ತು ಬೆಳ್ವೊಲ ಮೂನ್ನೂರು ಇವೆರಡೂ ಪ್ರಾಂತಗಳನ್ನು 'ಎರಡು ಮೂನ್ನೂರ ಪ್ರಾಂತಗಳ ಆರುನೂರರ ಪ್ರಾಂತ' ಅಂದರೆ ಎರಡರನೂರು ಪ್ರಾಂತ ಎಂದು ಕರೆಯಲಾಗುತ್ತಿತ್ತು) ಪ್ರಾಂತವನ್ನು ಸುಖಸಂತೋಷ ವಿನೋದದಿಂದ ಆಳುತ್ತಿದ್ದನು.

ಮಹಾಸಾಮಂತನೂ ಮಣಲೆಯರ ವಂಶಸಂಭೂತನೂ ಪುರಿಕರ (ಲಕ್ಷ್ಮೇಶ್ವರ) ಪುರವೇಶ್ವರನೂ ಆದ ಶ್ರೀಮತ್ ಮಣ್ಣೆಯ ಇಂದ್ರಕೇಶಿ ಅರಸನ ಆಳ್ವಿಕೆಯ ಸಂದರ್ಭದಲ್ಲಿ,

ಶಕವರ್ಷ ೯೮೫ ನೆಯ ಶೋಭಕ್ರಿತ ಸಂವತ್ಸರದ ಪುಷ್ಯ ಶುದ್ಧ ೫ ರವಿವಾರ ಉತ್ತರಾಯಣ ಸಂಕ್ರಾಂತಿ ವ್ಯತಿಪಾತದಂದು, ಬ್ರಾಹ್ಮಣ ಕುಲದ ಶ್ರೀ ನಾಗದೇವರ್ಯನ ಸುಪುತ್ರ ಸೋಮರಾಜನಾದಿತ್ಯನ ಸುಪುತ್ರನಾದ ಗ್ರಾಮಾಧಿಪತಿ ನಾಕರಸನ ಆಳ್ವಿಕೆಯ ಕಾಲದಲ್ಲಿ ಎರಗುಪ್ಪೆಯ (ಯರಗುಪ್ಪಿ) ಎರಡುನೂರು ಗಾವುಂಡರು, ಅರವತ್ತೊಕ್ಕಲರು (ಅರವತ್ತು ಜನ ಸದಸ್ಯರನ್ನೊಳಗೊಂಡ ವರ್ತಕರ ಸಂಘ) ಮತ್ತು ಪಟ್ಟಗಾರರು (ರಾಟೆಗಳ ಸಹಾಯದಿಂದ ನಯವಾದ ಬಟ್ಟೆಯನ್ನು ನೇಯುವವರು) ಕೂಡಿಕೊಂಡು, ನರಸಿಂಹಯ್ಯನ ಸುಪುತ್ರನಾದ ಮಾಳಿಮಯ್ಯಪ್ರಭು ಮತ್ತು ಈತನ ಸಹಧರ್ಮಿಣಿ ಮಾಣಿಕಬ್ಬೆ ಇವರ ಉದರದಲ್ಲಿ ಜನಿಸಿದ ಕೇಶಿವಯ್ಯಪ್ರಭುನ ಪರೋಕ್ಷ ವಿನಯಾರ್ಥವಾಗಿ ಮಾಡಿಸಿದ ಅರಬಾವಿಯ ಉಸ್ತುವಾರಿಯ ಸಲುವಾಗಿ, ಗ್ರಾಮದ ಪಶ್ಚಿಮಕ್ಕೆ ಭೂಮಿಯನ್ನು ದಾನವಾಗಿ ನೀಡಿದರು.

ಆ ಭೂಮಿಯ ಸೀಮಾ ವಿವರ ಹೀಗಿದೆ. ಭೂಮಿಯ ಉತ್ತರಕ್ಕೆ ಬೆಣ್ಣೆಹಳ್ಳ ಪೂರ್ವಕ್ಕೆ ಹಾಳ ಗೋಮಾಳ, ದಕ್ಷಿಣಕ್ಕೆ ಇಪ್ಪತ್ತು ಗೇಣು ಮತ್ತು ಇಪ್ಪತ್ತೈದು ಗಳೆ ಅಳತೆಯ ಕ್ಷೇತ್ರ. ಈ ಚಕ್ಕಬಂದಿಯೊಳಗಿರುವ ಬಾವಿಯ ಪೂರ್ವಕ್ಕೆ ಎರಡು ಮತ್ತರ ಭೂಮಿಯನ್ನಲ್ಲದೆ, ಸರ್ವತೊಂದರೆಗಳ ನಿವಾರಣೆಗೆಂದು ಮತ್ತೆ ಇಪ್ಪತ್ತೇಳು ಮತ್ತರ ಭೂಮಿಯನ್ನು ಮತ್ತು ಗಾಮುಂಡಗೇರಿಯ ದಕ್ಷಿಣ ಭಾಗದ ಏಳ್ಕಯ್ಯ ಮನೆಯೊಂದನ್ನು ದಾನ ನೀಡಿದರು.

ದಾನವಾಗಿ ನೀಡಿದ ಈ ಭೂಮಿ ಮತ್ತು ಮನೆಯನ್ನು ಪೂರ್ಣ ಮನಸ್ಸಿನಿಂದ ರಕ್ಷಿಸಿಕೊಂಡು ಹೋಗುವವರಿಗೆ ಗಂಗಾ ನದಿ ದಡದ ಪವಿತ್ರ ಕ್ಷೇತ್ರಗಳಾದ ಪ್ರಯಾಗ, ವಾರಣಾಸಿ, ಕುರುಕ್ಷೇತ್ರಗಳಲ್ಲಿ ಸಾವಿರ ಬ್ರಾಹ್ಮಣರಿಗೆ ಸಾವಿರ ಗೋವುಗಳನ್ನು ಮತ್ತು ಸಾವಿರ ಗದ್ಯಾಣಗಳನ್ನು ದಾನ ನೀಡಿದ ಫಲದೊಂದಿಗೆ ಅಶ್ವಮೇಧ ಯಾಗವನ್ನು ನೆರವೇರಿಸಿದ ಫಲವೂ ಲಭಿಸುವುದು. ಇವುಗಳನ್ನು ನಾಶಪಡಿಸಿದವರು, ಕೆಡಿಸಿದವರು, ಅಕ್ರಮಿಸಿದವರು ಮಹಾತೀರ್ಥ ಸ್ಥಳಗಳಲ್ಲಿ ಸಾವಿರ ಗೋವುಗಳನ್ನು, ಸಾವಿರ ಬ್ರಾಹ್ಮಣರನ್ನು, ಏಳು ಕೋಟಿ ತಪೋಧನರನ್ನು ಕೊಂದ ಪಾತಕರೆನಿಸುವರಲ್ಲದೆ, ಪಂಚಮಹಾಪಾತಕಿಗಳಾಗಿ ನೇರವಾಗಿ ನರಕಕ್ಕೆ ಹೋಗುವರು. ಬಡಗಿ ಚಾವುಂಡನ ಮನೆಯ ಜೀವನಾಧಾರಕ್ಕೆ ತೆರಿಗೆಯ ಅರ್ಧವನ್ನು ದಾನ ನೀಡಲಾಯಿತು.

ಹೀಗೆ, ಕುಂದಗೋಳ ಪ್ರದೇಶದ ವಾಸ್ತುಶಿಲ್ಪಕಲೆ ಮತ್ತು ಸಾಂಸ್ಕೃತಿಕ ಇತಿಹಾಸ ಅಧ್ಯಯನದ ದೃಷ್ಟಿಯಿಂದ ಈ ದೇವಾಲಯವು ಮಹತ್ವದ ಸಾಮಗ್ರಿಗಳನ್ನು ಒದಗಿಸುತ್ತದೆ. ಈ ದೇವಾಲಯದಲ್ಲಿರುವ ಮೇಲಿನ ಶಾಸನವು ದೇವಾಲಯದಿಂದ ತುಸು ಅಂತರದಲ್ಲಿರುವ ಈಗ ಹಾಳಾಗಿರುವ ಪ್ರಾಚೀನ ಬಾವಿಗೆ ಸಂಬಂಧಿಸಿದ್ದಾಗಿದ್ದು, ಆ ಬಾವಿಯ ಹತ್ತಿರವಿದ್ದ ಈ ಶಾಸನ ಶಿಲೆಯನ್ನು ಕಾಲಾಂತರದಲ್ಲಿ ಇಲ್ಲಿಗೆ ಸ್ಥಳಾಂತರಿಸಿ ಮುಖಮಂಟಪವನ್ನು ನಿರ್ಮಿಸುವ ಸಂದರ್ಭದಲ್ಲಿ ಗೋಡೆಯಲ್ಲಿ ಹಾಕಿ ಕಟ್ಟಲಾಗಿದೆ. ಈ ಶಾಸನದಲ್ಲಿ ಕೇಶವ ದೇವಾಲಯಕ್ಕೆ ಸಂಬಂಧಿಸಿದಂತೆ ಯಾವುದೇ ರೀತಿಯ ಉಲ್ಲೇಖಗಳಿಲ್ಲ. ಇದು ಈ ದೇವಾಲಯದ ಸಂಕೀರ್ಣದಲ್ಲಿರುವುದರಿಂದ ಪ್ರಸ್ತುತ ಲೇಖನದಲ್ಲಿ ಅದರ ವಿವರಣೆಯನ್ನು ನೀಡಲಾಗಿದೆ. ವಾಸ್ತು-ಶಿಲ್ಪ-ಶಾಸನ ದೃಷ್ಟಿಯಿಂದ ಈ ಪ್ರದೇಶದಲ್ಲಿ ಅಪರೂಪವೆನಿಸಿರುವ ಈದೇವಾಲಯವು ಈಗ ಭಗ್ನಾವಸ್ಥೆಯಲ್ಲಿದ್ದು, ಇದಕ್ಕೆ ಭಾರತೀಯ ಪುರಾತತ್ವ ಸರ್ವೆಕ್ಷಣ ಇಲಾಖೆ ಇಲ್ಲವೇ ರಾಜ್ಯ ಪುರಾತತ್ವ ಇಲಾಖೆ ಅಭಯಹಸ್ತ ನೀಡುವುದು ತುಂಬಾ ಅವಶ್ಯವಿದೆ.

* * *

# ಸಂಸ್ಕೃತದಲ್ಲಿ ಕನ್ನಡ ಛಂದಸ್ಸುಗಳ ಪ್ರಯೋಗ :

## ಕೆಲವು ಟಿಪ್ಪಣಿಗಳು

**ಎಸ್. ಜಗನ್ನಾಥ**

ಸಂಸ್ಕೃತದ ಛಂದಸ್ಸುಗಳನ್ನು ಸಂಸ್ಕೃತೇತರ ಭಾರತೀಯ ಭಾಷೆಗಳು ತಮ್ಮ ಸಾಹಿತ್ಯ ಪುಷ್ಟಿಗಾಗಿ ಸ್ವೀಕರಿಸಿರುವುದು ಎಲ್ಲರಿಗೂ ತಿಳಿದದ್ದೇ. ಸಂಸ್ಕೃತದ ಕವಿಗಳೂ ಸಹ ತಕ್ಕಮಟ್ಟಿಗೆ ಸಂಸ್ಕೃತೇತರಭಾಷಾ ಛಂದಸ್ಸುಗಳನ್ನು ಸ್ವೀಕರಿಸಿರುವುದು ಅಷ್ಟೊಂದು ಪ್ರಸಿದ್ಧವಾದ ವಿಚಾರವಲ್ಲ1. ಈ ವಿಷಯದಲ್ಲಿ ವಿದ್ವಾಂಸರ ಗಮನ ಸೆಳೆಯುವುದಕ್ಕಾಗಿ ಇದೊಂದು ಪುಟ್ಟ ಪ್ರಯತ್ನ2.

ಕನ್ನಡ ಪ್ರತ್ಯಯಗಳನ್ನು ಬಳಸದೇ ಕೇವಲ ಸಂಸ್ಕೃತ ಪ್ರತ್ಯಯಗಳನ್ನು ಬಳಸುವ ಪದಗಳಿಂದ ತುಂಬಿದ ಪದ್ಯಗಳನ್ನು ಮಾತ್ರ ಈ ಲೇಖನದಲ್ಲಿ 'ಸಂಸ್ಕೃತ ಪದ್ಯ'ಗಳೆಂದು ಪರಿಗಣಿಸಲಾಗಿದೆ3.

ಕ್ರಿ.ಶ. ೬೩೪ ರಲ್ಲಿ ರಚಿತವಾದ ರವಿಕೀರ್ತಿಯ ಶಾಸನದಲ್ಲಿ 'ಖ್ಯಾತ ಕರ್ಣಾಟಕ'ಗಳೆಂದು ಪ್ರಸಿದ್ಧವಾದ ಛಂದಸ್ಸುಗಳಲ್ಲಿ ಒಂದಾಗಿರುವ ಮತ್ತೇಭವಿಕ್ರೀಡಿತದ ಉದಾಹರಣೆಯನ್ನು ನೋಡಬಹುದು :

ವರದಾತುಂಗತರಂಗರಂಗವಿಲಸದ್ಧಂಸಾವಲೀಮೇಖಲಾಂ
ವನವಾಸೀಮವಮೃದ್ನತಾ ಸುರರಿಪುಪ್ರಸ್ಪರ್ಧಿನೀಂ ಸಂಪದಾ ।
ಮಹತಾ ಯಸ್ಯ ಬಲಾರ್ಣವೇನ ಪರಿತಃ ಸಂಛಾದಿತೋರ್ವೀತಲಂ
ಸ್ಥಲದುರ್ಗಂ ಜಲದುರ್ಗತಾಮಿವ ಗತಂ ತತ್ತತ್ ಕ್ಷಣೇ ಪಶ್ಯತಾಮ್ ॥

ಈ ಪದ್ಯದಲ್ಲಿ ಯತಿಯಿದೆ. ಶಿಥಿಲದ್ವಿತ್ವವಿಲ್ಲ. ಪ್ರಾಸವು ಸಂಸ್ಕೃತದಲ್ಲಿ ಐಚ್ಛಿಕವಾಗಿರುವುದರಿಂದ ಆದಿಪ್ರಾಸವನ್ನು ಕವಿ ಹಾಕಿಲ್ಲ.

ಕರ್ಣಾಟಶಬ್ದಾನುಶಾಸನದ ರಚಯಿತೃ ಭಟ್ಟಾಕಲಂಕನು ತನ್ನ ಗ್ರಂಥದ ಕೊನೆಯಲ್ಲಿ ರಚಿಸಿರುವ ಎರಡು ಪದ್ಯಗಳು ಮತ್ತೇಭವಿಕ್ರೀಡಿತದಲ್ಲಿವೆ. ಈ ಪದ್ಯಗಳಲ್ಲಿ ಆದಿ ಪ್ರಾಸವನ್ನು ಶುದ್ಧವಾಗಿ ಬಳಸಿರುವುದನ್ನು ನೋಡಬಹುದು. ಕನ್ನಡ ಛಂದಸ್ಸುಗಳಲ್ಲಿನ ಯತಿರಾಹಿತ್ಯವೂ ಸ್ಪಷ್ಟವಾಗಿ ಕಂಡುಬರುತ್ತದೆ. ಇವುಗಳಲ್ಲಿ ಒಂದು ಪದ್ಯವನ್ನುಇಲ್ಲಿ ತೆಗೆದು ಕೊಟ್ಟಿದೆ.

1. ಇದಕ್ಕೆ ಅಪವಾದವೆಂದರೆ ಆರ್ಯಾಛಂದಸ್ಸು ಪ್ರಾಕೃತಮೂಲದ್ದೆಂಬ ವಿಷಯ ವಿದ್ವದ್ವಲಯದಲ್ಲಿ ಪ್ರಸಿದ್ಧವಾಗಿದೆ.

2. ಸಂಸ್ಕೃತೇತರ ಭಾರತೀಯ ಭಾಷೆಗಳಲ್ಲಿ ಪ್ರಸಿದ್ಧವಾದ ಅನೇಕ ಛಂದಸ್ಸುಗಳಿಗೆ ಸಂಸ್ಕೃತದಲ್ಲಿ ಲಕ್ಷ್ಯ ಪದ್ಯಗಳು ಗೋಚರವಾಗುವುವಾದರೂ ಈ ಲೇಖನದ ವಿಷಯ ವ್ಯಾಪ್ತಿಯನ್ನು ಸಂಸ್ಕೃತದಲ್ಲಿ ಕಣ್ಣಿಗೆ ಬೀಳುವ ಕೆಲವು ಕನ್ನಡ ಛಂದಸ್ಸುಗಳಿಗೆ ಮಾತ್ರ ಮೀಸಲುಗೊಳಿಸಲಾಗಿದೆ.

ಶಕವರ್ಷೇ ರಸನೇತ್ರಬಾಣಶಶಿಸಂಖ್ಯೇಽಬ್ದೇತಪೋಮಾಸಿ ಶೋ
ಭಕೃತಿ ಶ್ರೀ ಸಿತಪಂಚಮೀಗುರುದಿನೇ ಲಗ್ನೇ ಕಟೇ ಪೌಷಭೇ ।

ಅಕಲಂಕಾಹ್ವಯಯೋಗಿಶಿಷ್ಯತಿಲಕೋ ಗ್ರಂಥಂ ಸತಾಂ ಮಂಜರೀ

ಮಕರಂದಾಖ್ಯಮಿದಂ ಮತಂ ವ್ಯರಚಯಂ ಭಟ್ಟಾಕಲಂಕೋ ಮುನಿಃ ॥

ಹಿಂದೆ ಉಲ್ಲೇಖಿಸಿದ ರವಿಕೀರ್ತಿಯ ಶಾಸನದ ಕೊನೆಯ ಪದ್ಯವು ಸ್ಕಂಧಕದಲ್ಲಿದೆ.ಇದು ಕನ್ನಡದ ಕಂದವೇ :

ಯೇನಾಯೋಜಿ ನವೇಶ್ಮ ಸ್ಥಿರಮರ್ಥವಿಧೌ ವಿವೇಕಿನಾ ಜಿನವೇಶ್ಮ ।

ಸ ವಿಜಯತಾಂ ರವಿಕೀರ್ತಿಃ ಕವಿತಾಶ್ರಿತಕಾಳಿದಾಸಭಾರವಿಕೀರ್ತಿಃ ॥

'ಖ್ಯಾತ ಕರ್ಣಾಟಕ'ಗಳಲ್ಲಿ ಒಂದಾದ ಚಂಪಕಮಾಲೆಗೆ ಸಂಸ್ಕೃತದಲ್ಲಿ ಉದಾಹರಣೆಗಳು ತೀರಾ ವಿರಳ. ಸಿಕ್ಕಿರುವ ಕೆಲವನ್ನು ಶ್ರೀ ಟಿ. ವಿ. ವೆಂಕಟಾಚಲಶಾಸ್ತ್ರಿಗಳು ತಮ್ಮ ಕನ್ನಡ ಛಂದಃ ಸ್ವರೂಪದಲ್ಲಿ ಉದಾಹರಿಸಿದ್ದಾರೆ. (ಪುಟ ೧೭೯) ಪ್ರಕೃತ ಲೇಖಕನ ಗಮನಕ್ಕೆ ಬಂದ ಮತ್ತೊಂದು ಉದಾಹರಣೆಯನ್ನು ಇವುಗಳ ಜೊತೆ ಸೇರಿಸಬಹುದು.

ರತ್ನಾಕರನೆಂಬ ಕವಿಯು ಕಾಶ್ಮೀರವನ್ನು ಕ್ರಿ.ಶ. ೮೫೫ ರಿಂದ ಕ್ರಿ.ಶ. ೮೮೪ ರ ವರೆಗೆ ಆಳಿದ ಅವಂತಿವರ್ಮನ ಆಸ್ಥಾನಕವಿಯಾಗಿದ್ದವನು. ಅವನು ರಚಿಸಿದ ಮಹಾಕಾವ್ಯ ಹರವಿಜಯದಲ್ಲಿ ಚಂಪಕಮಾಲೆಯು ಕಂಡುಬರುತ್ತದೆ.

ಇತಿ ರಸಪೋಷಯುಕ್ತಿಮದನುಜ್ಝಿತವೃತ್ತಿ ಗುಣವ್ಯಪಾಶ್ರಯಂ

ಪ್ರಥಿತಶುಭಾಂಗಲಕ್ಷಣಮಪೂರ್ವಕೃತಿಪ್ರವಣತಾಂ ದಧತ್ ।

ಕವಿರಿವ ನಾಟಕಂ ಘಟಿತಸಂಧಿ ವಿಧಾಯ ಶಶಾಂಕಶೇಖರಃ

ಶಿಖರಿಸುತಾರ್ಧಮರ್ಧವಪುಷಿ ಪ್ರಮದಾನ್ವಿತಮಾನಸೋಽಭವತ್ ॥

(೨೧-೫೭ ಪುಟ ೨೮೬)

ಈ ಪದ್ಯದಲ್ಲಿ ಬಳಸಿರುವ ವೃತ್ತ ಚಂಪಕಮಾಲೆಯೆಂಬುದು ನಿರ್ವಿವಾದವಾಗಿದ್ದರೂ ರತ್ನಾಕರನಿಗೆ ಈ ವೃತ್ತವು ಯಾವ ಹೆಸರಿನಲ್ಲಿ ಪರಿಚಯವಾಗಿತ್ತೋ ತಿಳಿಯದು. ಏಕೆಂದರೆ ಈ ವೃತ್ತಕ್ಕೆ ಶಶಿವದನಾ, ಚಿತ್ರಲತಾ, ಸಿದ್ಧಿ ಹಾಗೂ ಸಲಿಲನಿಧಿ ಎಂಬ ಬೇರೆ ಹೆಸರುಗಳನ್ನು ವಿಭಿನ್ನ ಲಾಕ್ಷಣಿಕರು ಕೊಟ್ಟಿರುವ ವಿಚಾರ ಗೊತ್ತಾಗಿದೆ. (ವಿವರಗಳಿಗೆ ನೋಡಿರಿ : ಟಿ. ವಿ. ವೆಂಕಟಾಚಲಶಾಸ್ತ್ರಿ, ಕನ್ನಡ ಛಂದಃಸ್ವರೂಪ, ಪುಟ, ೧೭೯)

3. ಸಂಸ್ಕೃತ ಪ್ರಾತಿಪದಿಕಗಳ ಜೊತೆಗೆ ಕನ್ನಡ ಪ್ರತ್ಯಯಗಳನ್ನು ಬಳಸುವ ಪದಗಳು ಪೂರ್ಣ ಪ್ರಮಾಣದ ಸಂಸ್ಕೃತಪದಗಳಾಗುವುದಿಲ್ಲ. ಇಂಥ ಪದಗಳಿಂದ ಕೂಡಿದ ಪದ್ಯಗಳು ಪೂರ್ಣಪ್ರಮಾಣದ ಸಂಸ್ಕೃತಪದ್ಯಗಳಾಗುವುದೂ ಇಲ್ಲ. ಆದ್ದರಿಂದ ಇಂಥವನ್ನು ಪ್ರಕೃತ ಲೇಖನದಲ್ಲಿ ಉಲ್ಲೇಖಿಸಿಲ್ಲ.

ಕ್ರಿ.ಶ. ೧೦ನೇ ಶತಮಾನದಲ್ಲಿದ್ದ ಸೋಮದೇವನು ಯಶಸ್ತಿಲಕಚಂಪೂವಿನಲ್ಲಿ ಅಲ್ಲಲ್ಲಿ ಪ್ರಾಕೃತ ಹಾಗೂ ಅಪಭ್ರಂಶಗಳ ಛಂದಸ್ಸನ್ನು ಪ್ರಯೋಗಿಸಿರುವ ವಿಷಯವನ್ನು ಶ್ರೀ ಕೆ. ಕೆ. ಹೆಂಡಿಕಿ ಅವರು ತಮ್ಮ Yasastilaka and Indian Culture ಎಂಬ ಗ್ರಂಥದಲ್ಲಿ ತೋರಿಸಿಯೇ ಇದ್ದಾರೆ. (ಪುಟ ೧೭೭-೧೮೦) ಅವರು ರಗಳೆ ಛಂದಸ್ಸಿನ ಬಗೆಗೆ ಅಲ್ಲಿ ಉಲ್ಲೇಖಿಸಿಲ್ಲ. ಆದರೆ ಕೆಳಗಿನ ಪದ್ಯವು ಮಟ್ಟರಗಳೆಗೆ ಉದಾಹರಣೆಯಾಗುತ್ತದೆ :

ಆಂಧ್ರೀಕುಚಕುಟ್ಮಲಕೃತವಿಲಾಸ ।
ಚೋಳೀನಯನೋತ್ಪಲವನವಿಕಾಸ ॥
ಯವನೀನಿತಂಬನಖಪದವಿದಗ್ಧ ॥
ಮಲಯಸ್ತ್ರೀರತಿಭರಕೇಲಿಮುಗ್ಧ॥
ವನವಾಸಿಯೋಷಿದಧರಾಮೃತಾರ್ಹ ।
ಸಿಂಹಳಮಹಿಳಾನನತಿಲಕಬರ್ಹ ॥
ಗಜಿನೀಂ ಜಹೀಹಿ ಭೋಜಾವನೀಶ ।
ಚೇದೀಶ ವಿಶಾಶ್ಮ ವಶಪ್ರವೇಶ ॥
ಅಶ್ಮಂತಕವೇಶ್ಮ ವಿಹಾಯ ಯಾಹಿ ।
ಪಲ್ಲವ ಲಘುಕೇಲೀರಸಮುಪೈಹಿ ॥
ಚೋಳೇಶಜಲಧಿಮುಲ್ಲಂಘ್ಯ ತಿಷ್ಠ ।
ಪಾಂಡ್ಯಸ್ಮಯಮುಜ್ಝಾಹಿತಪ್ರತಿಷ್ಠ ॥
ಕೇರಳಮಹಿಳಾಮುಖಕಮಲಹಂಸ ।
ವಂಗೀವನಿತಾಶ್ರವಣಾವತಂಸ ॥
ಚೋಳೀಸ್ತ್ರೀ ಕುಚಕುಟ್ಮಲವಿನೋದ ।
ಪಲ್ಲವರಮಣೀಕೃತವಿರಹಖೇದ ।.
ಕುಂತಲಕಾಂತಾಲಕಭಂಗನಿರತ ।
ಮಲಯಾಂಗನಾಂಗನಖದಾನನಿರತ ॥
ವನವಾಸಿಯೋಷಿದೀಕ್ಷಣವಿಮುಗ್ಧ ।
ಕರ್ಣಾಟೀಯುವತಿಕೈತವವಿದಗ್ಧ ॥

ಇದು ಛಂದೋಂಬುಧಿಯಲ್ಲಿ ಉದ್ಧೃತವಾಗಿದೆ. (ಪುಟ ೧೨೫-೧೨೬)

ಮಗ್ಗೆಯ ಮಾಯಿದೇವನ (ಹದಿನೈದನೆಯ ಶತಮಾನ) ಷಟ್‌ಸ್ಥಲಗದ್ಯವು ರಗಳೆ ಛಂದಸ್ಸುಗಳಿಗೆ ಸೊಗಸಾದ ಉದಾಹರಣೆಯಾಗಿದೆ೧. ಈ ರಗಳೆಗಳಲ್ಲಿ ಪ್ರತಿಯೊಂದು ಪಂಕ್ತಿಯೂ ಸಹ ದ್ವಿತೀಯಾಕ್ಷರಪ್ರಾಸ ಹಾಗೂ ಅಂತ್ಯ ಪ್ರಾಸವನ್ನು ತುಂಬಾ ಬಿಗಿಯಾಗಿ ನಿರ್ವಾಹ ಮಾಡುವುದು ಕಂಡುಬರುತ್ತದೆ. ಇದು ಸಂಸ್ಕೃತಮಯವಾಗಿದ್ದರೂ ಪೀಠಿಕಾಪದ್ಯ ಹಾಗೂ ಉಪಸಂಹಾರ ಪದ್ಯ ಕನ್ನಡದಲ್ಲಿರುವುದು, ಕನ್ನಡದ ಪ್ರತ್ಯಯಗಳು ಒಂದೆರಡು ಜಾಗಗಳಲ್ಲಿ ಸೇರಿಕೊಂಡಿರುವುದು ಹಾಗೂ ಎಲ್ಲಾ ಪದಗಳಲ್ಲಿಯೂ ಪ್ರಥಮಾ ವಿಭಕ್ತಿಯನ್ನು ಅನುಸ್ವಾರದಲ್ಲಿ ಕೊನೆಗಾಣಿಸಿರುವುದನ್ನು ಲೆಕ್ಕಕ್ಕೆ ತೆಗೆದುಕೊಂಡರೆ ಇದನ್ನು ಶುದ್ಧ ಸಂಸ್ಕೃತಕೃತಿಯೆಂದು ಹೇಳಲಾಗುವುದಿಲ್ಲ. ಇದರ ಉದ್ಧೃತಿಯು ಪ್ರಕೃತಲೇಖನದಲ್ಲಿ ಈ ಕಾರಣಕ್ಕಾಗಿ ಹೊರಚ್ಚಾಗುವುದಾದರೂ ಸಂಸ್ಕೃತದಲ್ಲಿಯೇ ರಗಳೆ ರಚನೆಯ ಪ್ರಯತ್ನವು ಇವರಲ್ಲಿ ತಕ್ಕಮಟ್ಟಿಗೆ ಕಾಣಬರುವುದರಿಂದ ಇದರ ಕೆಲವು ಪಂಕ್ತಿಗಳನ್ನು ಇಲ್ಲಿ ತೆಗೆದುಕೊಟ್ಟಿದೆ.

೧. ಪ್ರೊ. ಸಿ. ಮಹಾದೇವಪ್ಪನವರು ಸಂಪಾದಿಸಿದ ಪ್ರಭುಗೀತಾಗ್ರಂಥದ (ಇಂಗ್ಲೀಷ್ ಪೀಠಿಕಾ ಸಹಿತ) ಮೊದಲನೆಯ ಅನುಬಂಧವಾಗಿ ಷಟ್ ಸ್ಥಲಗದ್ಯದ ಸಮಗ್ರಪಾಠವನ್ನು ನೀಡಲಾಗಿದೆ.

ಭಕ್ತಸ್ಥಲದಿಂದ :

(ಹರಿಗತಿ)

ಶ್ರೀಮದನಾದಿವಿಮುಕ್ತಂ ಭಕ್ತಂ ಪ್ರೇಮಕಳಾಸಂಯುಕ್ತಂ ಭಕ್ತಂ

ಉತ್ಸಾಹಾಗುಣಶಕ್ತಂ ಭಕ್ತಂ ಕುತ್ಸಿತಕರ್ಮವಿಧಿಕ್ತಂ (ವಿವಿಕ್ತಂ?) ಭಕ್ತಂ

ಲೋಕಾಚಾರವಿರಕ್ತಂ ಭಕ್ತಂ ಲೋಕಾನುಗ್ರಹಶಕ್ತಂ ಭಕ್ತಂ

**ಮಾಹೇಶ್ವರಸ್ಥಲದಿಂದ :**

(ದ್ವಿರದಗತಿ)

ಶ್ರೀ ಲಿಂಗನಿಷ್ಠಾಗರಿಷ್ಠ ಮಾಹೇಶ್ವರಂ

ಶೀಲವ್ರತಕ್ರಿಯಾಶ್ರೇಷ್ಠ ಮಾಹೇಶ್ವರಂ

ಪ್ರಾರಬ್ಧಪರ್ಯಂತಕಾರಿಮಾಹೇಶ್ವರಂ

ಸಾರಸಜ್ಜನಮನೋಹಾರಿಮಾಹೇಶ್ವರಂ

ಉಕ್ತಿಗಮನದ್ವಿತಯವಂತಮಾಹೇಶ್ವರಂ

ಯುಕ್ತಿಪೂರ್ವಾಂಗಮಿತಶಾಂತಮಾಹೇಶ್ವರಂ

**ಪ್ರಸಾದಿಸ್ಥಲದಿಂದ :**

(ತುರಗವಲನರಘಟ)

ಶ್ರೀಶಿವಾಭಿಧಾನಲಿಂಗಸಾವಧಾನಿ ಸುಪ್ರಸಾದಿ

ಪಾಶಮೋಚನಾರ್ಪಣಕ್ರಿಯಾಭಿಮಾನಿತ ಪ್ರಸಾದಿ

ಇಂದ್ರಿಯಾದಿಮಿತಸಮಸ್ತವಸ್ತುಭೇದಕಪ್ರಸಾದಿ

ಬಿಂದುನಾದಕಾಲಕರ್ಮಚಕ್ರಸಾಧಕಪ್ರಸಾದಿ

**ಪ್ರಾಣಲಿಂಗಿಸ್ಥಲದಿಂದ :**

(ಇಮ್ಮಡಿ ರಗಳೆ)

ಶ್ರೀಮನ್ನಿರೂಢಗಾಢಾನುಭವ ದಿವ್ಯ ಪ್ರ

ಭಾಮಯನಿರಾಮಯಪ್ರಾಣಲಿಂಗೀಶ್ವರಂ

ವ್ಯಾಮೋಹದೂರಫಲಕಾಮಸಂಹಾರವಿ

ಶ್ರಾಮವಿದ್ಯಾಮಯ ಪ್ರಾಣಲಿಂಗೀಶ್ವರಂ

..................................

..................................

ನಿತ್ಯಂ ತರದಿ ಶೋಕಮಾತ್ಮದೀಧಿತಿರಿತಿ

ಶ್ರುತ್ಯರ್ಥಕೀರ್ತಿತಪ್ರಾಣಲಿಂಗೀಶ್ವರಂ

**ಶರಣಸ್ಥಲ :**

(ಮಧುರಗತಿ)

ಶ್ರೀಪರಮಾನಂದೋದಯ ಶರಣಂ
ವ್ಯಾಪಿತಘನಮಹಿಮಾವಧಿ ಶರಣಂ
ನಿಜಲೀಲಾಪರಿವರ್ತಿತಶರಣಂ
ತ್ರಿಜಗಜ್ಜನಸಂಕೀರ್ತಿತಶರಣಂ
.................................
.................................
ಸ್ವಯಮೇವ ಸ್ವಸ್ವಪ್ರಿಯ ಶರಣಂ
ಜಯ ಜಯ ಜಯಶಬ್ದಾಶ್ರಯಶರಣಂ

ಐಕ್ಯ ಸ್ಥಲದಿಂದ :

(......................)೧
ಶ್ರೀಮನ್ನಿಸ್ಸಂಗಂ ಲಿಂಗೈಕ್ಯಂ
ವ್ಯೋಮಾತೀತಂ ಲಿಂಗೈಕ್ಯಂ
ಸುಮಹದ್ಭಾವಕರಂ ಲಿಂಗೈಕ್ಯಂ
ಸಮರಸರೂಪಧರಂ ಲಿಂಗೈಕ್ಯಂ
...........................
...........................
ಸಾಕ್ಷಿತಯಾ ತಿಷ್ಠತಿ ಲಿಂಗೈಕ್ಯಂ
ಸಾಕ್ಷಾದ್ ಐಪುರಪತಿ ಲಿಂಗೈಕ್ಯಂ

ಕನ್ನಡದಲ್ಲಿ ಅನೇಕ ಸ್ತೋತ್ರಗಳು ಕಂದ, ಷಟ್ಪದಿ, ವೃತ್ತಗಳು ಇವುಗಳಲ್ಲಿ ರಚಿತವಾಗಿರುವ ವಿಷಯ ಸುಪ್ರಸಿದ್ಧವಷ್ಟೆ-ಭಾಮಿನಿಷಟ್ಪದಿಯಲ್ಲಿ ರಚಿತವಾಗಿರುವ ಇಂಥ ಸ್ತೋತ್ರಗಳಲ್ಲಿ ಒಂದು ಪದ್ಯ ಶುದ್ಧ ಸಂಸ್ಕೃತದಲ್ಲಿರುವುದನ್ನು ನೋಡಬಹುದು :

ಈಶ ಜಯ ಸರ್ವೇಶಜಯ ಪರ-
ಮೇಶ ಜಯ ಭೂತೇಶ ಜಯ ಗಿರಿ-
ಜೇಶ ಜಯ ವಿಶ್ವೇಶಜಯ ವಿಶ್ವಪ್ರಕಾಶ ಜಯ ।
ಕೇಶವಪ್ರಿಯ ಜಯ ಜಯಾಧ್ವರ-
ನಾಶ ಜಯ ಮದನಾರಿದೋಷವಿ-
ನಾಶ ಜಯ ಭೂಧರವಿಭೂಷಣ ಗುರು ವಿರೂಪಾಕ್ಷ ॥
(ಶತಕ ಸಂಪುಟ ೧ ಪುಟ ೧೨೬)

ಇದೊಂದು ಅಜ್ಞಾತಕರ್ತೃಕ ಪದ್ಯ. ಇದರ ಕವಿ ಗದುಗಿನ ಭಾರತ ಕರ್ತೃ

ವೀರನಾರಾಯಣನ ಸಮಕಾಲಿಕನಿರಬಹುದೆಂಬುದು ಸಂಪಾದಕರಾದ ಶ್ರೀ ಜಿ. ಎ. ಶಿವಲಿಂಗಯ್ಯನವರ ಊಹೆ. (ಪೀಠಿಕೆ ಪುಟ XXX)

೧. ಇಲ್ಲಿ ಗ್ರಂಥಪಾತವಾಗಿರಬಹುದು. ಈ ಭಾಗ ಯಾವ ಗತಿಯದೆಂದು ಹೇಳುವ ಸೂಚನೆ ಇಲ್ಲಿ ಇರಬೇಕಾಗಿತ್ತು.

ವಾರ್ಧಕ ಷಟ್ಪದಿಯ ಪ್ರಯೋಗ ಲಕ್ಷ್ಮೀಶನ (ಕಾಲ ಸು. ೧೫೩೦) ಜೈಮಿನಿ ಭಾರತದಲ್ಲಿ ಕಂಡುಬರುತ್ತದೆ :

ಮಿತ್ರಾಯ ಸೂರ್ಯಾಯ ಹಂಸಾಯ ಪೂಷ್ಣೇ ಸ-
ವಿತ್ರೇ ಜಗಚ್ಚಕ್ಷುಷೇ ಚಂಡಘೃಣಯೇ ಪ-
ವಿತ್ರಾಯ ಪಿಂಗಾಯ ಪುರುಷಾಯ ಭಾನವೇ ಜ್ಯೋತಿಷೇ ಭಾಸ್ಕರಾಯ ।
ಸತ್ರೈಕರೂಪಾಯ ವಿಮಲಾಯ ವಿಶ್ವರ
ಕ್ಷಿತ್ರೇ ಸಹಸ್ರಕಿರಣಾಯ ರವಯೇ ಮಂದ-
ಪಿತ್ರೇ ದಿವಾಕರಾಯ ಬ್ರಹ್ಮವಿಷ್ಣುರುದ್ರಾತ್ಮನೇ ತುಭ್ಯಂ ನಮಃ।। ೨೦.೪೦ ಪುಟ ೨೧೮

ಮತ್ತೊಮ್ಮೆ ವಾರ್ಧಕಷಟ್ಪದಿಯು ಸಂಸ್ಕೃತದಲ್ಲಿ ಬಳಕೆಯಾದದ್ದು ಕಳೆದ ಶತಮಾನದಲ್ಲಿಯೇ. ಸೋಸಲೆ ಅಯ್ಯ ಶಾಸ್ತ್ರಿಗಳ 'ಶೇಷರಾಮಾಯಣ'ದಲ್ಲಿ ಈ ಮೂರು ಸಂಸ್ಕೃತ ಪದ್ಯಗಳನ್ನು ನೋಡಬಹುದು :

ಸಪ್ತಾಶ್ವ ಪರಿಕಲಿತರಥಸಮಾರೂಢ ನಿಜ-
ದೀಪ್ತಿ ಪ್ರಕಾಶೀಕೃತಾಶೇಷದಿಗ್ವಲಯ
ದೃಪ್ತನಿಶಿಚರವರ್ಗಭೀಕರಪ್ರಕರಪ್ರಸರಗಗನವಲಯಾಧಿರಾಜ ।
ತಪ್ತಚಾಮೀಕರದ್ಯುತಿಪೂರ್ಣಬಿಂಬ ಪರಿ-
ಕ್ಲೃಪ್ತಕಾಷ್ಠಾದಿಕಾಲಾತ್ಮನಿಜಚಲನಪ-
ರ್ಯಾಪ್ತನಿರುಪಮಿತಪ್ರಭಾವ ವಾಸರವಿಭೋ ದೇವ ಭೋ ತೇ ನಮೋಸ್ತು ।। (೧೫-೩೫)

ತಾಮರಸಮಿತ್ರಾಯ ಮಿತ್ರಾಯ ದಶಶತೋ-
ದ್ದಾಮ ನಿಜಭಾನವೇ ಭಾನವೇ ಕೃತತಮಃ
ಸ್ತೋಮವಿಧ್ವಂಸಾಯ ಹಂಸಾಯ ಸುರಕುಲೋತ್ತಂಸಾಯ ಭಾಸ್ಕರಾಯ ।
ವ್ಯೋಮನಿ ವಿಹಾರಿಣೇ ಹಾರಿಣೇ ನತಜನ-
ಕ್ಷೇಮಂಕರಾಯ ಸೂರಾಯ ಸೂರ್ಯಾಯ ಸಕ-
ಲಾಮಯವಿಘಾತಾಯ ಪೂತಾಯ ನಿಗಮಶತಗೀತಾಯ ತೇ ನಮೋಸ್ತು ।। (೧೫-೩೬)

ಅಮರಪತಿವಾಯ್ವಗ್ನಿವಿತ್ತನಾಥೇಶಾನ-
ಯಮವರುಣಮುಖಸಕಲದೇವಸ್ವರೂಪಾಯ
ಕಮಲಿನೀಕಾಂತಾಯ ಕಲ್ಯಾಣರೂಪಾಯ ಕೋಕಶೋಕಾಪಹಾಯ ।
ಅಮಿತತೇಜೋರಾಶಯೇ ಚಿತ್ರರಶ್ಮಯೇ
ಶಮಿತಾನತಾರ್ತಯೇ ಶುಭಕಾರಿಮೂರ್ತಯೇ
ದ್ಯುಮಣಯೇ ತರಣಯೇ ಪರಮಾತ್ಮನೇ ದ್ವಾದಶಾತ್ಮನೇ ತೇ ನಮೋಸ್ತು ।। (೧೫-೩೭)

ಒಂದು ಗಮನಾರ್ಹ ಸಂಗತಿಯೇನೆಂದರೆ ಈ ಎರಡು ಕಾವ್ಯಗಳಲ್ಲೂ ಶುದ್ಧ ಸಂಸ್ಕೃತವು ಬಳಕೆಯಾಗಿರುವುದು ಸೂರ್ಯಸ್ತುತಿಗೇ. ಸೋಸಲೆ ಅಯ್ಯಾ ಶಾಸ್ತ್ರಿಗಳು ಸೂರ್ಯನ ಸ್ತುತಿಗೆ ಶುದ್ಧ ಸಂಸ್ಕೃತವನ್ನುಪಯೋಗಿಸಿರುವುದು, ಲಕ್ಷ್ಮೀಶನ ಪ್ರಭಾವದಿಂದ ಎಂಬುದು 'ಸೂರ್ಯಪ್ರಕಾಶ' ದಷ್ಟು ಸ್ಫುಟವಾಗಿದೆ.

ಸುಪ್ರಸಿದ್ಧ ಇತಿಹಾಸಜ್ಞರಾಗಿದ್ದ ದಿ. ಡಾ. ಎಸ್. ಶ್ರೀಕಂಠಶಾಸ್ತ್ರಿಗಳು ಪ್ರೌಢಕವಿಗಳೂ ಆಗಿದ್ದರು. ಅವರು ಉತ್ಪಲಮಾಲೆಯಲ್ಲಿ ರಚಿಸಿರುವ ಶ್ರೀಕಂಠೇಶ್ವರ ಶತಕದ ಈ ಪದ್ಯದಲ್ಲಿ ಶುದ್ಧ ಸಂಸ್ಕೃತ ಕಾಣಿಸುತ್ತದೆ :

ಶ್ರೀದ ಜನಪ್ರಸೀದ ಗತಖೇದ ರಿಪುಪ್ರಚಯ ಪ್ರಮಾದ ನಿ-

ರ್ಭೇದ ಸುಮಪ್ರಸಾದ ಸಮುದಂಚಿತನಾದ ಕಳಾಪ್ರಮೋದ ನಿ-

ರ್ವೇದ ವಿಷಾದಬಾಧ ಸಮರಾಂಗಣಯೋಧ ಶುಭಪ್ರವಾದ ಪ್ರಾ-

ಸಾದಕೃತಾದ್ರಿಶೃಂಗ ಗರಕಂಧರ ಶಂಕರ ಚಂದ್ರಶೇಖರಾ ॥ (ಶತಕ ಸಂಪುಟ ೧ರ ಪೀಠಿಕೆಯಲ್ಲಿ ಉದ್ಧೃತ ಪುಟ XVI)

ಭಾಮಿನೀಷಟ್ಪದಿಯಲ್ಲಿ ಶುದ್ಧ ಸಂಸ್ಕೃತಕಾವ್ಯ ರಚನೆ ಸಾಧ್ಯವೆಂದು ಮೊಟ್ಟಮೊದಲು ಕವಿಕುಲಕ್ಕೆ ತೋರಿಸಿಕೊಟ್ಟ ಕೀರ್ತಿ ದಿ. ಬಿ. ವೆಂಕಟರಾಮಭಟ್ಟರದ್ದು. ಇವರ ಜೀವಿತಕಾಲ ಕ್ರಿ.ಶ. ೧೯೧೫ ರಿಂದ ಕ್ರಿ.ಶ. ೧೯೯೧. ಸಂಸ್ಕೃತ ಹಾಗೂ ಹಳೆಗನ್ನಡ ಇವೆರಡರಲ್ಲೂ ಕವಿಗಳಾಗಿದ್ದ ಇವರು ರಚಿಸಿರುವ ಮೂರು ಸಂಸ್ಕೃತ ಸಾಹಿತ್ಯ ಕೃತಿಗಳಿಗೆ ಕನ್ನಡ ಛಂದಸ್ಸನ್ನೇ ಬಳಸಿರುವುದು ಕುತೂಹಲಕರವಾಗಿದೆ.

ಅವುಗಳಲ್ಲಿ ಮೊದಲ ಎರಡು, ಭಾಮಿನೀಮಾಧವಂ (ಶ್ರೀಕೃಷ್ಣ ಚರಿತೆ) ಹಾಗೂ ಮೋಹನಾಯನಂ ಅಥವಾ ಭಾಮಿನೀಮೋಹನಂ (ಮಹಾತ್ಮಾ ಗಾಂಧಿ ಚರಿತೆ) ಮೂರನೆಯದು, ಪುಣ್ಯಕೋಟಿ ಕಥಾ. ಇದು, ಗೋವಿನ ಹಾಡಿನ ಸಂಸ್ಕೃತಾನುವಾದ. ಇದರಲ್ಲಿ ಛಂದೋಗತಿಯು ಗೋವಿನ ಹಾಡಿನ ಮಟ್ಟಿನಲ್ಲಿಯೇ ಇದೆ. ಆದಿಪ್ರಾಸವೂ ಸಹ ಶುದ್ಧವಾಗಿ ಬಳಕೆಯಾಗಿದೆ. ಇಲ್ಲಿ ಭಾಮಿನೀಮಾಧವ ಹಾಗೂ ಮೋಹನಾಯನ ಇವೆರಡರಿಂದ ತಲಾ ಎರಡು ಪದ್ಯಗಳನ್ನು ತೆಗೆದುಕೊಟ್ಟಿದೆ.

**ಭಾಮಿನೀಮಾಧವದಿಂದ** : (ಮೊದಲನೆಯ ಎರಡು ಪದ್ಯಗಳು)

ಕ್ಷೀರಮಂಬ ದಿಶೇತಿ ಕೃಷ್ಣೇ
ಚಾರುಹಾಸೇ ಸತಿ ರುದತ್ಯಥ
ವಾರಯಿತುಮಾಹೇತಿ ಕೃಷ್ಣಂ ಗೋಪಿಕಾ ಜನನೀ ।
ಭೀರುಭೀರುರ್ಭವಸಿ ಬಾಲಕ
ಮಾ ರುದಿಹಿ ರಜನೀ ಭವತ್ಯಥ
ಕ್ಷೀರಮಾಶು ದದಾಸಿ ತಾವನ್ಮಾತ್ರ ರಸ್ವ ವೃಥಾ ॥
ಬಾಲಕಾ ಇವ ಸೋಽರ್ಭಕೋಽಪಿ ವಿ-
ಲೋಲಹೃದಯೋ ರುದತಿ ಜನನೀಂ

ಚಾಲಯತಿ ನವನೀತಮಮೃತಂ ಯಾಚತೇ ಚ ದಧಿ ।
ಬಾಲಸಹಜಾಲಾಪಕೈರಪಿ
ಬಾಲಿಕಾ ಮುಗ್ಧಾಶ್ಚ ವೃದ್ಧಾ
ಲೀಲಯಾ ಮೋಹಯತಿ ಬಹುಧಾ ಚೇಷ್ಟತೇ ಸ್ವಪಿತಿ ॥

**ಮೋಹನಾಯನದಿಂದ :**

ರಾಜತೇ ಕಿಲ ಭಾರತೇ ಬಹು
ರಾಜಧಾನೀಪರಿಗತೋ ವರ
ವಾಜಿಜನ್ಮಸ್ಥಾನಮೇಕಂ ಪಾವನಃ ಸತತಮ್ ।
ತೇಜಸಾ ಮಹತಾ ಲಸದ್‌ಗೃಹ
ರಾಜಿಕುಸುಮಾರಾಮಮಂದಿರ
ರಾಜಿತೋ ದೇಶೋ ಹಿ ಕಾಥೇವಾಟ ಇತಿ ನಾಮ್ನಾ ॥ (ಪದ್ಯ ೪, ಪುಟ ೨೮)
ಕಾರವೋ ನಿಜಕರ್ಮಕುಶಲಾಃ
ಪಾರಮಾರ್ಥಿಕತಾಪವಿತ್ರ ವಿ
ಚಾರಸಾರಾಃ ಸೂರಯಃ ಕೃತಿ ಖಿದ್ಗಿ ನಃ ಕ್ವಚನ ।
ವೀರಯೋಧಾ ಇವ ಚ ಕವಯ
ಶ್ಚಾರುರಚನಾಃ ಸಂತಿ ರಸಿಕಾ
ಹಾರಕುಂಡಲವಲಯರಾಂಕವಶೋಭಿನೋ ಯತ್ರ ॥ (ಪದ್ಯ ೯, ಪುಟ ೨೯)

ಒಂದು ಆಶ್ಚರ್ಯದ ಸಂಗತಿಯೆಂದರೆ ಸಂಸ್ಕೃತದಲ್ಲಿ ತ್ರಿಪದಿಯ ರಚನೆ ಆಗುವುದಕ್ಕೆ ಹಲವಾರು ಶತಮಾನಗಳಿಗೆ ಮುನ್ನವೇ ಕನ್ನಡದ ತ್ರಿಪದಿಗಳ ಲಕ್ಷಣಗಳನ್ನು ಜಯಕೀರ್ತಿ ತನ್ನ ಛಂದೋನುಶಾಸನದಲ್ಲಿಯೂ, ಮುಮ್ಮಡಿ ಸೋಮೇಶ್ವರ ಮಾನಸೋಲ್ಲಾಸದಲ್ಲಿಯೂ ಹಾಗೂ ನಿಶ್ಶಂಕಶಾರ್ಙ್ಗದೇವನು ಸಂಗೀತರತ್ನಾಕರದಲ್ಲಿಯೂ (ಕನ್ನಡದ ಲಕ್ಷ್ಯಗಳನ್ನು ಗಮನಿಸಿ) ಲಕ್ಷಿಸಿರುವುದುಂಟು.ಲಕ್ಷಣದಲ್ಲಿಯೇ ಲಕ್ಷ್ಯತ್ವವೂ ಬರುವಂತೆ ಲಕ್ಷಿಸುವುದು ಛಂದಶ್ಶಾಸ್ತ್ರದಲ್ಲಿ ತೀರಾ ಸಾಧಾರಣ ಸಂಗತಿಯಷ್ಟೆ. ಈ ದೃಷ್ಟಿಯಿಂದ ಜಯಕೀರ್ತಿಯ ತ್ರಿಪದೀ ಲಕ್ಷಣ ಪದ್ಯಗಳನ್ನೇ ತ್ರಿಪದೀಲಕ್ಷ್ಯ ಪದ್ಯಗಳನ್ನಾಗಿಯೂ ಪರಿಗಣಿಸಬಹುದು.ಆದರೂ ಸಹ ಸ್ವತಂತ್ರವಾಗಿ ಸಂಸ್ಕೃತದಲ್ಲಿ ತ್ರಿಪದಿಯನ್ನು ರಚಿಸದಿರಲು ಪ್ರಯೋಗಶೀಲತೆಯ ಅಭಾವವೇ ಕಾರಣವೆನ್ನದೇ ವಿಧಿಯಿಲ್ಲ. ಸ್ವತಂತ್ರವಾದ ತ್ರಿಪದಿಯ ರಚನೆಗೆ ಸಂಸ್ಕೃತ ಭಾರತಿಯು ೨೦ನೇ ಶತಮಾನದ ವರೆಗೆ ಕಾಯಬೇಕಾಯಿತು.

ಮಹಾರಾಜ ಕಾಲೇಜಿನ ನಿವೃತ್ತ ಸಂಸ್ಕೃತ ಪ್ರಾಚಾರ್ಯ ಶ್ರೀ ಸಿ. ಜಿ. ಪುರುಷೋತ್ತಮ ರವರು ಕಾವ್ಯತರಂಗಿಣೀ ಎಂಬ ಹೆಸರಿನ ಎರಡು ಸಂಪುಟಗಳಲ್ಲಿ ಕನ್ನಡದ ಪ್ರಸಿದ್ಧ ಕವಿಗಳ ಪದ್ಯಗಳನ್ನು ಮೂಲಪದ್ಯಗಳ ಛಂದೋಗತಿಯನ್ನೇ ಹಿಡಿದು ಅನುವಾದಿಸಿದ್ದಾರೆ.

ಕಾವ್ಯತರಂಗಿಣಿಯ ಮೊದಲನೆಯ ಸಂಪುಟವು (ಪ್ರ. ೧೯೫೯) ಕುವೆಂಪುರವರ ಪದ್ಯಗಳ ಅನುವಾದಕ್ಕೆ ಮೀಸಲಾಗಿದೆ. ಎರಡನೆಯ ಸಂಪುಟದಲ್ಲಿ (ಪ್ರ. ೧೯೬೭) ಕೆಲವು

ಪ್ರಸಿದ್ಧ ಆಧುನಿಕ ಕನ್ನಡಕವಿಗಳ ಹಿಂದೀ ಕವಿಗಳ ಹಾಗೂ ಸರ್ವಜ್ಞನ ಕವಿತೆಗಳನ್ನು ಅನುವಾದಿಸಲಾಗಿದೆ. ಈ ಸಂಪುಟದಲ್ಲಿ ಒಟ್ಟು ೨೪ ಸರ್ವಜ್ಞವಚನಗಳ ಅನುವಾದವಿದೆ. ಈ ಪ್ರಯತ್ನವನ್ನು ಇನ್ನೂ ಮುಂದುವರೆಸಿ ಶ್ರೀಯುತರು ಸರ್ವಜ್ಞವಚನಾನಿ ಎಂಬ ಪ್ರತ್ಯೇಕ ಸಂಪುಟವನ್ನೇ (ಪ್ರ. ೧೯೯೩) ಪ್ರಕಟಪಡಿಸಿದ್ದಾರೆ. ಅದರಲ್ಲಿ ೫೩೮ ಪದ್ಯಗಳನ್ನು ಸಂಸ್ಕೃತಕ್ಕೆ ಅನವಾದಿಸಿರುವುದನ್ನು ನೋಡಬಹುದು.

ಇಲ್ಲಿ ಮೂರು ಅನುವಾದಗಳನ್ನು ತೆಗೆದುಕೊಟ್ಟಿದೆ :

**ಮೂಲ** : ಧ್ಯಾನದಾ ಹೊಸಬತ್ತಿ ಮೌನದಾ ತಿಳಿದುಪ್ಪ
ಸ್ವಾನುಭವವೆಂಬ ಬೆಳಗಿನಾ ಜ್ಯೋತಿಯ
ಜ್ಞಾನವಂ ಸುಡುಗು ಸರ್ವಜ್ಞ॥ (೧೧೯)

**ಅನುವಾದ** : ಧ್ಯಾನನವವರ್ತಿಕಾ ಮೌನನಿರ್ಮಲಘೃತಂ
ಸ್ವಾನುಭವ ಇತಿ ಸಙ್ಜ್ವಲಜ್ಯೋತಿರಾದಹ
ತ್ಯ ಜ್ಞಾನಮೇವ ಸರ್ವಜ್ಞ॥ (೧೧೯)

**ಮೂಲ** : ಕಾಗೆಯಗುಳನು ಕಂಡು ಕೂಗುವುದು ಬಳಗವನು
ಕಾಗೆ ಕೋಳಿಗಳ ತೆರದುಣ್ಣದವನಿರವು
ಕಾಗೆಗೂ ಕಷ್ಟ ಸರ್ವಜ್ಞ॥ (೨೧೨)

**ಅನುವಾದ** : ಕಾಕೋನ್ನ ಮಾಲಕ್ಷ್ಯ ಕಾಕಕುಲಮಾಹ್ವಯತಿ
ಕಾಕಕುಕ್ಕುಟ ಇವಾಹೂಯಾತ್ತಿ ಯೋ ನೈವ
ಕಾಕಾವರಃ ಸ ಸರ್ವಜ್ಞ॥ ೨೧೨)

**ಮೂಲ** : ರುದ್ರಕರ್ತನು ತಾನು ಅರ್ಧನಾರಿಯು ಆದ
ಇದ್ದವರೊಳಾರು ಸತಿಯರ ಹೃದಯವನು
ಗೆದ್ದವರಾರು ಸರ್ವಜ್ಞ ॥ (೪೫೨)

**ಅನುವಾದ** : ರುದ್ರಸ್ತು ಕರ್ತಾऽಪಿ ಸೋऽರ್ಧನಾರ್ಯಭವದಹ !
ಭದ್ರೇಷು ಶಿಷ್ಟೇಷು ಕಃ ಸತೀಹೃದಯಾನಿ
ಭದ್ರಾಣಿ ಜಯತಿ ಸರ್ವಜ್ಞ ॥ (೪೫೨)

ಸಂಸ್ಕೃತದಲ್ಲಿ ತ್ರಿಪದಿಯ ನಿರ್ವಾಹವು ಮಹಾಪರಿಶ್ರಮಸಾಧ್ಯ. ಹೆಜ್ಜೆ ಹಜ್ಜೆಗೆ ಪ್ರಾಸದ ಬೇಲಿಯು ಕವಿಯನ್ನು ಕಂಗೆಡಿಸಿಬಿಡುತ್ತದೆ. ಆದರೆ ಶ್ರೀ ಸಿ. ಜಿ. ಪುರುಷೋತ್ತಮರವರು ತ್ರಿಪದಿಯು ಒಡ್ಡುವ ಈ ಸವಾಲನ್ನು ಧೈರ್ಯದಿಂದ ಎದುರಿಸಿರುವುದು ಮೆಚ್ಚುವಂಥದ್ದು. ಹಲವಾರು ಕಡೆ ಕವಿ ಪ್ರಾಸದಲ್ಲಿ ಅತಿಸ್ವಾತಂತ್ರ್ಯವನ್ನು ತೋರಿಸಿರುವುದು ಕಂಡುಬಂದರೂ ಸಂಸ್ಕೃತಕ್ಕೆ ಮೊಟ್ಟಮೊದಲಾಗಿ ತ್ರಿಪದಿಯನ್ನು ಕೊಟ್ಟ ಕವಿ ಎಂಬ ಕೀರ್ತಿಗೆ ಶ್ರೀ ಸಿ. ಜಿ. ಪುರುಷೋತ್ತಮರು ಭಾಜನರಾಗುವುದರಲ್ಲಿ ಸಂಶಯವೇನೂ ಇಲ್ಲ.

ಪ್ರಕೃತ ಲೇಖಕನೂ ಸಹ ಕನ್ನಡದ ಛಂದಸ್ಸುಗಳನ್ನು ಸಂಸ್ಕೃತದಲ್ಲಿ ಬಳಸುವ ಪ್ರಯೋಗಗಳನ್ನು ಮಾಡಿದ್ದುಂಟು. ಈಗ ರಚನೆಗೆ ಕೈಗೆತ್ತಿಕೊಂಡಿರುವ ಬ್ರಹ್ಮಕಾವ್ಯ (ಅಪ್ರಕಟಿತ) ಕೌಟಿಲ್ಯವಂದನ, ಮಹಾವೀರರಘಟಾ ಹಾಗೂ ಅಂಧಕಾಸುರ ಸಂಹಾರ ಇವುಗಳಲ್ಲಿ ಷಟ್ಪದಿಗಳ, ರಗಳೆಗಳ ಹಾಗೂ ತ್ರಿಪದಿಯ ಪ್ರಯೋಗ ಅಲ್ಲಲ್ಲಿ ಆಗಿದೆ.

**ಕೆಲವು ಉದಾಹರಣೆಗಳು :**

**ಬ್ರಹ್ಮಕಾವ್ಯದಿಂದ :**

ಕಾಯೋ ದಿಷ್ಟವಿಧೇಯೋ
ದೇಯೋ ಭವತಿ ದಹನಾರ್ಥಮೇವಮಪಶ್ಯನ್
ಪ್ರಾಯೋ ನರಃ ಪ್ರಕೃತ್ಯಾ
ಪ್ರೇಯೋ ವಾಂಛತಿ ನಿರಂತರಂ ನ ಶ್ರೇಯಃ (ಕಂದ, ೬, ೫)
ಏವಮಸ್ಯ ಮನಸ್ತಟಿನ್ಯಾಂ
ಭಾವನೋರ್ಮ್ಯಾಂ ಸಂಭವಂತ್ಯಾಂ
ಪಾವನೀ ದೃಕ್ ತಸ್ಯ ವಿಶದಾ ಶಂಕರೇ ನ್ಯಪತತ್
ಗ್ರಾವಕುತುಕೀ ಖೇಲನೋತ್ಕೋ
ಯಾವದಸ್ಮ್ಯಹಮರ್ಭಕೀಯನ್
ತಾವದೀಕ್ಷೇ ವಜ್ರಮಿತಿ ಸ ಸ್ಫುಟಿತಧೀರಭವತ್ (ಭಾಮಿನಿ ಷಟ್ಪದಿ, ೬.೭)
ಮತ್ತಾ ನಾಂ ತೇಷಾಂ ಕಿಂ ಚಿತ್ತೇಷು ಸ್ವನತಿ ಸ್ಮ
ಧಿತ್ತೇತಿ ನೃತ್ಯೋಚಿತಪಾಟಮ್ (ಏಳೆ, ೬.೨೧)
ದಿನಚತುಷ್ಟಯಮೇಷ ಶಯ್ಯಾಮಧಿರೂಢಃ ಸನ್
ಪುನರಪಿ ಪೂರ್ವವತ್ ಸ್ವಪ್ನೇ
ಮನಸಾ ಕಲ್ಪಿತವಾನ್ ಭುವನಾನಿ ಜಾಗರ್ತೌ
ಅನಿಶಂ ತಸ್ಯಾಭೂತ್ ಸಮಸ್ಯಾ (ಸಾಂಗತ್ಯ, ೬-೨೯)
ಜ್ಞೇಯರಹಿತಾಯಾಂ ಸುಷುಪ್ತೌ
ಶ್ರೀಯತೇ ಕಿಂ ಕೇನ ಸರ್ವಂ
ಲೀಯತೇ ಜಾಗ್ರತಿ ಪುನಶ್ಚ
ಜ್ಞಾಯತಾಮಾತ್ಮಾ ಕಥಮ್ (ಗೋವಿನ ಹಾಡಿನ ಮಟ್ಟು, ೪೩)

**ಮಹಾವೀರರಘಟಾದಿಂದ :**

ಉಚ್ಚಾ ವಚರುಚಿಚಿತ್ರೇಽಮುಷ್ಮಿನ್
ಸಚ್ಚಾಸ್ತ್ರ ಸ್ತೋತ್ರೇ ವಿಶ್ವಸ್ಮಿನ್
ಸಕಲಜನೇಷು ಪ್ರೀತೇರ್ಧಾರಾಂ
ನ ಕಿಲ ಸುಲಭಮುತ್ಸೃಷ್ಟುಮುದಾರಾಮ್

ವಿವಿಧವಿಕಲ್ಪಿತಜಲ್ಪೈರ್ನಿಬಿಡೇ
ಸುವಿದಿತಲೌಕಿಕವಿಷಯೇಷ್ವಜಡೇ
ಸಂಸಾರೋನ್ನತ್ಯವನತಿಗಹನೇ
ಹಿಂಸಾಪ್ರಭೃತಿದುರಾಶಯವಹನೇ
ಲೋಕೇ ಶಮಲವಹೀನೇ ಜಾತಂ
ಸ್ತೋಕೇತರರುಚಿ ತೇಜಃ ಸ್ವೀತಂ
..............................
..............................
ನಷ್ಟಾಽಂಧಕೃತಿರ್ಭಾನಾವುದಿತೇ
ಹೃಷ್ಟಾ ಶ್ರೀರಾಕಾಶೇ ಮುದಿತೇ೧ (ರಗಳೆ)

**ಕೌಟಿಲ್ಯವಂದನದಿಂದ :**

ಅಭಿನೇಯಂ ನೃತ್ಯಂ ನಃ ಪ್ರಭುವಾಚಾ ಸ್ತುತಿಯೋಗ್ಯಂ
ಸಭಯಾ ಚ ದ್ರವತಾಂ ರಸಪಾಕ್ಯೈ(ಃ) ರಸಿಕಾನಾಮ್
ಅಭಿತಶ್ಚ ವ್ರಾತಂ ವಿಬುಧಾನಾಮ್ (ತ್ರಿಪದಿ)
ಭೂಯಾತ್ ಪರಮಾ ಸಿದ್ಧಿಃ ಸ್ತೂಯಾದವನೀಪಾಲೋ
ದೇಯಾತ್ ಸಂದೋಹೋಽಮಾತ್ಯಾ ನಾಮಸ್ಮಭ್ಯಂ
ಸ್ವೀಯಾನಿ ಶ್ಲಾಘಾವಚನಾನಿ (ತ್ರಿಪದಿ)

ಪ್ರಕೃತ ಲೇಖಕನ 'ಗೋಗೀತಂ' ಎನ್ನುವುದು ಗೋವಿನ ಹಾಡಿನ ಅನುವಾದ. ದಿ. ವೆಂಕಟರಮಣ ಭಟ್ಟರ ಅನುವಾದದಂತೆಯೇ ಇದರಲ್ಲಿಯೂ ಗೋವಿನ ಹಾಡಿನ ಮಟ್ಟು ಹಾಗೂ ಆದಿಪ್ರಾಸ ಎರಡೂ ಇವೆ.

ಬೆಂಗಳೂರಿನ ಶ್ರೀರಾಮಚಂದ್ರತ್ಯಾಗಲೀ ಅವರೂ ಸಹ ಗೋವಿನ ಹಾಡನ್ನು ಸಂಸ್ಕೃತದಲ್ಲಿ ಗೋವಿನ ಹಾಡಿನ ಮಟ್ಟಿನಲ್ಲಿಯೇ ಸಂಗ್ರಹವಾಗಿ (ಆದಿಪ್ರಾಸವಿಲ್ಲದೆ) ಅನುವಾದ ಮಾಡಿರುವ ವಿಷಯ ಪ್ರಕೃತಲೇಖಕನಿಗೆ ಗೊತ್ತಾಗಿದೆ.

ಇತ್ತೀಚೆಗೆ ಶ್ರೀ ಕುಮಾರನಿಜಗುಣರು ಕನ್ನಡದಲ್ಲಿ ಸೃಷ್ಟಿಸಿರುವ ಸಾವಿರಾರು ನವೋತ್ಪಾದ್ಯ ಛಂದಸ್ಸುಗಳ ಪೈಕಿ ಕೆಲವಕ್ಕೆ ಯತಿಯಿಟ್ಟಲ್ಲಿ ಸಂಸ್ಕೃತ ಪದ್ಯ ರಚನೆ ಸಾಧ್ಯವಾಗುತ್ತದೆ. ಕುಮಾರನಿಜಗುಣರ ರಾಮನಾಮ ಹಾಗೂ ಸಾರಸರಳ ಈ ಛಂದಸ್ಸುಗಳಲ್ಲಿ ಪ್ರಕೃತ ಲೇಖಕನು ರಚಿಸಿದ ಪದ್ಯಗಳನ್ನು ಇಲ್ಲಿ ಉದಾಹರಿಸಲಾಗಿದೆ.

**ಛಂದಸ್ಸು : ರಾಮನಾಮ**

ಆತನೋತ್ಯಂಜಸಾ ವಿಶ್ವಸ್ಮಿನ್ ಕವನಕರಣಧನ್ಯಾನಾಂ
ನೂತನಚ್ಛಂದಸಾ ಪದ್ಯಾನಾಂ ಕರಣಮತುಲಮಾನಂದಮ್ ।
ರೀತಯಃ ಕಿಂ ಪುನರ್ವೃತ್ತಾನಾಂ ಶ್ರವಣಪುಟನಿಪಾತಾನು

೧. ಇದು ೯೪ ಸಾಲುಗಳಷ್ಟು, ದೀರ್ಘವಾಗಿರುವುದರಿಂದ ಮೊದಲನೆಯ ಹನ್ನೆರಡು ಸಾಲುಗಳನ್ನು ಮಾತ್ರ ಇಲ್ಲಿ ತೆಗೆದುಕೊಟ್ಟಿದೆ.

ಪ್ರೀತಿತೋ ನಾಮಭಿರ್ಧೀರಂಗಸ್ಫುಟಿತವಿಶದಲಕ್ಷ್ಮಾ ದ್ರ್ಯಾಃ ॥

**ಛಂದಸ್ಸು : ಸಾರಸರಳ**

ವಿಹಿತಾ ರಸಿಕವ್ರಾತಚಿತ್ತಗರಂಗೇ ತ್ವ ಯಾದ್ಯ

ಬಹುಧಾ ಕಲಿತಾ ನವ್ಯ ವೃತ್ತಗತಿಃ ಕಾವ್ಯ ಶೂರ ! ।

ಗಹನೇ ಶಿಖಿನೋ ನೃತ್ಯಚಾರುಗತೌ ಯಾ ಜಯೇನ

ಮಹಿತಂ ಕವಿತಾಪಾಕಸೃಷ್ಟಿಯಶಃ ಶ್ಲಾಘ್ಯಮೇತಿ ॥

* * *

---

## ಪರಾಮರ್ಶಿತ ಗ್ರಂಥಗಳು


'ಕನ್ನಡ ಛಂದಃಸ್ವರೂಪ' ಟಿ. ವಿ. ವೆಂಕಟಾಚಲಶಾಸ್ತ್ರಿ ಪ್ರ : ಡಿ. ವಿ. ಕೆ. ಮೂರ್ತಿ ಮೈಸೂರು, ದ್ವಿತೀಯ ಪರಿಷ್ಕೃತ ಆವೃತ್ತಿ, ೧೯೯೬

'ಛಂದೋಂಬುಧಿ' ನಾಗವರ್ಮ ವಿರಚಿತ. ಸಂ. ಕುಕ್ಕಿಲಕೃಷ್ಣಭಟ್ಟ, ಪ್ರ : ಡಿ. ವಿ. ಕೆ. ಮೂರ್ತಿ, ಕೃಷ್ಣಮೂರ್ತಿಪುರಂ ಮೈಸೂರು-೪, ೧೯೭೫.

'ಹರವಿಜಯ' ಸಂ. ಪಂಡಿತ ದುರ್ಗಾಪ್ರಸಾದ ಹಾಗೂ ಪಂಡಿತ ಕಾಶೀನಾಥ ಪಾಂಡುರಂಗ ಪರಬ್ ಪ್ರ : ನಿರ್ಣಯಸಾಗರ ಪ್ರೆಸ್, ಮುಂಬಯಿ, ೧೮೯೦.

'ಜೈಮಿನಿ ಭಾರತ' ಸಂ. ಬಿ. ಶಿವಮೂರ್ತಿಶಾಸ್ತ್ರಿ ಕರ್ನಾಟಕ ಸರ್ಕಾರದ ಪ್ರಕಟನೆ ೧೯೫೬ ಪುಟ ೨೧೮.

ಶೇಷರಾಮಾಯಣ ಸೋಸಲೆ ಅಯ್ಯಾಶಾಸ್ತ್ರಿ; ದ್ವಿತೀಯ ಮುದ್ರಣ ೧೯೨೭.

'ಸರ್ವಜ್ಞವಚನಾನಿ' ಸಿ. ಜಿ. ಪುರುಷೋತ್ತಮ, ಶ್ರೀ ಜಯಮಾರುತಿ ಪ್ರಕಾಶನ ಮೈಸೂರು; ೧೯೯೩

'ಶತಕ ಸಂಪುಟ ೧' ಸಂಪಾದಕರು ಜಿ. ಎ. ಶಿವಲಿಂಗಯ್ಯ, ಶಿವಕವಿ ಪ್ರಕಾಶನ, ಮೈಸೂರು, ೧೯೯೫.

'ಕಾವ್ಯಾಮೃತಮ್' ಬಿ. ವೆಂಕಟರಮಣಭಟ್ಟ, ಅಖಿಲ ಕರ್ನಾಟಕ ಸಂಸ್ಕೃತ ಪರಿಷತ್ ಬೆಂಗಳೂರು, ೧೯; ೧೯೯೨

'ಪುಘುಗೀತಾ' ಮಗ್ಗೆಯ ಮಾಯಿದೇವ ವಿರಚಿತ ಸಂ. ಪ್ರೊ. ಸಿ. ಮಹಾದೇವಪ್ಪ, ಶರದಾ ನಿವಾಸ, ಬೆಂಗಳೂರು ಸಂಶೋಧನಕೋಟೆ, ಬೆಂಗಳೂರು; ೨೦೦೧.

'ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ' ಆನೇ ಸಂಪುಟ (ಶಬ್ದಾನುಶಾಸನ ಹಸ್ತಪ್ರತಿಯ ವಿವರಣೆಯ ಭಾಗ ಹಸ್ತಪ್ರತಿ ಸಂಖ್ಯೆ ಕೆ. ೧೪೧) ಸಂ. ಎಚ್. ದೇವೀರಪ್ಪ, ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು; ೧೯೬೩.

'ಕೌಟಿಲ್ಯ ವಂದನ' ಜಗನ್ನಾಥ ಪ್ರ: ಶಾಂಡಿಲ್ಯ, ಮೈಸೂರು; ೨೦೦೨.

'ಮಹಾವೀರರಘಟಾ' ಜಗನ್ನಾಥ ನಂದನವನ ಕಲ್ಪತರು ಪತ್ರಿಕೆಯ ೫ನೇ ಸಂಚಿಕೆಯಲ್ಲಿ ಅಚ್ಚಾಗಿದೆ. ಪ್ರ : ಶ್ರೀಶ್ರೀ ವಿಜಯಶೀಲಚಂದ್ರಸೂರಿ, ಅತುಲ್ ಎಚ್. ಕಪಾಡಿಯಾ, ಎ ೯ ಜಾಗೃತಿ ಫ್ಲಾಟ್ಸ್, ಬಿಹೈಂಡ್ ಮಹಾವೀರ ಟವರ್, ಪಾಲಡೀ ಅಹಮದಾಬಾದ್- ೩೮೦೦೦೭.

'ಬ್ರಹ್ಮ ಕಾವ್ಯ' ಜಗನ್ನಾಥ, ಅಪ್ರಕಟಿತ ಹಸ್ತಪ್ರತಿ.

# ಟೀಕೆ-ಟಿಪ್ಪಣಿಗಳು

## ೧. ಪಂಪನ ಪ್ರಸಿದ್ಧ ಪದ್ಯ 'ತೆಂಕಣಗಾಳಿ ಸೋಂಕಿದಡಂ....'

-ನಳಿನಿ ವೆಂಕಟೇಶ್

ಕರ್ನಾಟಕ ಲೋಚನದ ಜೂನ್-ಡಿಸೆಂಬರ್-೯೩, ಜೂನ್-೯೪, ಹಾಗೂ ಜೂನ್-೯೫ರ ಸಂಚಿಕೆಗಳಲ್ಲಿ 'ಟೀಕೆ-ಟಿಪ್ಪಣಿ' ವಿಭಾಗದ ಕಾವ್ಯಾರ್ಥ ಕುತೂಹಲದಲ್ಲಿ ಪಂಪನ ಪ್ರಸಿದ್ಧ ಪದ್ಯವಾದ 'ತೆಂಕಣಗಾಳಿ ಸೋಂಕಿದೊಡಂ.......' ಪದ್ಯ ಭಾಗದ ಅರ್ಥವನ್ನು ಕುರಿತು ಕುತೂಹಲ ಆಸಕ್ತಿದಾಯಕವಾದ ಚರ್ಚೆ ನಡೆಯಿತು. ಆದರೂ ಅದರ ಅರ್ಥವನ್ನು ಮರುಪರಿಶೀಲಿಸಬಹುದೆನ್ನಿಸುತ್ತದೆ.

ಬನವಾಸಿ ದೇಶದ ವರ್ಣನೆಯ ಆ ನಾಲ್ಕು ಪದ್ಯಗಳು ಇಂತಿವೆ.

'ಸೊಗಯಿಸಿ ಬಂದ ಮಾಮರನೆ ತಳ್ತೆಲೆವಳ್ಳಿಯೆ ಪೂತ ಜಾತಿ ಸಂ<br>
ಪಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ ನಲ್ಲರೊಳ್ಮೊಗಂ<br>
ನಗೆಮೊಗದೊಳ್ ಪಳಂಚಲೆಯ ಕೂಡುವ ನಲ್ಲರೆ ನೋಟ್ಪೊಡಾವ ಬೆ<br>
ಟ್ಟುಗಳೊಳಮಾವ ನಂದನವನಂಗಳೊಳಂ ಬನವಾಸಿ ದೇಶದೊಳ್' ೪-೨೮

'ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗ<br>
ಳ್ಗಾಗರಮಾದ ಮಾನಸರೆ ಮಾನಸರಂತವರಾಗಿ ಪುಟ್ಟಲೇ<br>
ನಾಗಿಯುಮೇನೊ ತೀರ್ದಪುದೆ ತೀರದೊಡಂ ಮಱಿದುಂಬಿಯಾಗಿ ಮೇಣ್<br>
ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿ ದೇಶದೊಳ್' ೪-೨೯

'ತೆಂಕಣಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಮಿಂಪನಾಳ್ದ ಗೇ<br>
ಯಂ ಕಿವಿವೊಕ್ಕೊಡಂ ಬಿರಿದ ಮಲ್ಲಿಗೆಗಂಡೊಡಮಾದ ಕೆಂದಲಂ<br>
ಪಂಗೆಡೆಗೊಂಡೊಡಂ ಮಧುಮಹೋತ್ಸವಮಾದೊಡಮೇನನೆಂಬೆನಾ<br>
ರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ವನವಾಸಿ ದೇಶಮಂ' ೪-೩೦

'ಅಮರ್ದಂ ಮುಕ್ಕುಳಿಪಂತುಟಪ್ಪ ಸುಸಿಲೊಂದಿಂಪುಂ ತಗುಳ್ಪೊಂದು ಗೇ<br>
ಯ ಮುಮಾದಕ್ಕರಗೊಟ್ಟಿಯುಂ ಚದುರರೊಳ್ವಾತುಂ ಕುಳಿರ್ ಕೋಟ್ಪ ಜೊಂ<br>
ಪಮುಮೇವೇಳ್ವುದನುಳ್ಳ ಮೆಯ್ಸುಖಮುಮಿಂತೆನ್ನಂ ಕರಂ ನೋಡಿ ನಾ<br>
ಡೆ ಮನಂಗೊಂಡಿರೆ ತೆಂಕನಾಡ ಮಱಿಯಲ್ಕಿನ್ನೇಂ ಮನಂ ಬರ್ಕುಮೇ' ೪-೩೧

ಇಲ್ಲಿ ಮೊದಲನೆಯ ಪದ್ಯದಲ್ಲಿ ಪ್ರಾರಂಭವಾಗುವ ಬನವಾಸಿ ದೇಶದ ವರ್ಣನೆಯು ಮುಂದಿನ ಪದ್ಯವಾದ 'ಚಾಗದ ಭೋಗದಕ್ಕರದ.....' ಲ್ಲಿಯೂ ಮುಂದುವರಿದು ....'ಮಾನಸರೆ ಮಾನಸರ್' ಎಂಬಲ್ಲಿಗೆ ಮುಗಿಯುತ್ತದೆ. ಅಲ್ಲಿಂದ ಮುಂದೆ ಪಂಪನು ತನ್ನ ಮನೋಭಿಲಾಷೆಯನ್ನು "ಅಂತವರಾಗಿ ಪುಟ್ಟಲೇನಾಗಿಯುಮೇನೊ ತೀರ್ದಪುದೆ ತೀರದೊಡಂ ಮರಿದುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿ ದೇಶದೊಳ್"- ಎಂದು ಹೊರಗೆಡಹುತ್ತಾನೆ.

ಹಾಗೆಯೇ ಮುಂದಿನ "ತೆಂಕಣಗಾಳಿ ಸೋಂಕಿದೊಡಂ.........." ಎಂಬ ಪದ್ಯದಲ್ಲಿ "......ಮಧುಮಹೋತ್ಸವಮಾದೊಡಂ" ಎಂಬಲ್ಲಿಗೆ ವರ್ಣನೆ ಮುಗಿದುಹೋಗಿದೆ. ಮುಂದೆ ಆ ಬನವಾಸಿ ದೇಶದ ಆಕರ್ಷಣೆಯ ಒತ್ತಡವನ್ನು ತಡೆಯಲಾರದೆ "ಏನನೆಂಬೆನಾರಂಕುಸಮಿಟ್ಟೊಡಂ ನೆನೆವುದೆನ್ನಮನಂ ವನವಾಸಿ ದೇಶಮಂ" ಎಂದು ಉದ್ಗರಿಸುತ್ತಾನೆ. ಆದ್ದರಿಂದ ಇಲ್ಲಿ 'ಆರಂಕುಸಮಿಟ್ಟೊಡಂ' ಎಂಬಲ್ಲಿನ 'ಆರ್' ಪದಕ್ಕೆ ಶ್ರೀ ಜೋಷಿಯವರು[೧] ಸೂಚಿಸಿರುವ 'ಪಲಸು' ಅಥಾವಾ 'ಹಲಸು' ಎಂಬ ಅರ್ಥ ಯಾವ ರೀತಿಯಿಂದಲೂ ಸರಿಹೊಂದುವುದಿಲ್ಲ. "ಇಲ್ಲಿ 'ಅಂಕುಸ'ಕ್ಕೆ ಆಯುಧವೆಂದು ಪದಶಃ ಅರ್ಥಮಾಡದೆ 'ಅಂಕುಶವಿಡು' ಎಂಬುದಕ್ಕೆ ಲಾಕ್ಷಣಿಕವಾಗಿ ಅಡ್ಡಿಮಾಡು ಎಂದು ಅರ್ಥ ಮಾಡುವುದು ಸೂಕ್ತ"[೨] ಎಂದು ಪ್ರೊ. ಗರ್ಗೇಶ್ವರಿ ವೆಂಕಟಸುಬ್ಬಯ್ಯನವರು ಹೇಳಿರುವುದು ಸರಿಯಾಗಿದೆ. (ಆದ್ದರಿಂದ ಆಜಾರು ನಾಗರಾಜರಾಯ, ಕಟೀಲು[೩] ಅವರು ಸೂಚಿಸಿರುವ "ಆರುಂ ಕಿಸುವಿಟ್ಟೊಡಂ" ಎಂಬ ಊಹಿತ ಪಾಠವು ಅನಾವಶ್ಯಕ.)

ಮುಂದಿನ "ಅಮರ್ದಂ ಮುಕ್ಕುಳಿಪಂತುಟಪ್ಪ..........." ಎಂಬ ಪದ್ಯದಲ್ಲಿಯೂ ".....ಮೆಯ್ಸುಖಮುಮಂ....." ಎಂಬಲ್ಲಿಗೆ ವರ್ಣನೆ ಮುಗಿದು, ಮತ್ತೆ ಪಂಪನು "ಇಂತೆನ್ನಂ ಕರಂ ನೋಡಿ ನಾಡೆ ಮನಂಗೊಂಡಿರೆ ತೆಂಕನಾಡ ಮಱೆಯಲ್ಕಿನ್ನೇಂ ಮನಂ ಬರ್ಕುಮೇ" ಎಂದು ಮುಗಿಸುತ್ತಾನೆ.

ಇಲ್ಲಿನ ನಾಲ್ಕೂ ಪದ್ಯಗಳೂ ಒಂದಕ್ಕೊಂದು ಸಂಬಂಧಿಸಿವೆ. ಬನವಾಸಿ ವರ್ಣನೆಯೂ ಪಂಪನ ಮನೋಭಾವವೂ ಒಂದಕ್ಕೊಂದು ಹೆಣೆದುಕೊಂಡಿವೆ. ಪಂಪನ ಮನಸ್ಸಿನ ಆಸೆ ಬನವಾಸಿ ದೇಶದಲ್ಲಿ ಮನುಷ್ಯನಾಗಿ ಹುಟ್ಟುವುದೋ ಅಥವಾ ಅದು ಸಾಧ್ಯವಾಗದಿದ್ದಲ್ಲಿ ಮರಿದುಂಬಿಯಾಗಿಯೋ ಕೋಗಿಲೆಯಾಗಿಯೋ ಹುಟ್ಟುವುದಷ್ಟಕ್ಕೇ ಸೀಮಿತವಾಗಿಲ್ಲ. ಮುಂದುವರಿದು ಇಂಥ ಆಸೆಯನ್ನು ಯಾರಾದರೂ ತಿರಸ್ಕರಿಸಿದರೂ ಪ್ರತಿರೋಧಿಸಿದರೂ ಅವನ ಮನಸ್ಸು ಬನವಾಸಿ ದೇಶವನ್ನು ನೆನೆಯುತ್ತಲೇ ಇರುತ್ತದೆ. ಕೊನೆಯ ಪದ್ಯದಲ್ಲೂ ".......ಆ ಸುಖಗಳು ಮನಸ್ಸನ್ನಾಕ್ರಮಿಸಿದ್ದರೂ ದಕ್ಷಿಣ ದೇಶವನ್ನು ಮರೆಯಲು ನನ್ನ ಮನಸ್ಸು ಒಪ್ಪುವುದಿಲ್ಲ ಎಂದುಕೊಳ್ಳುತ್ತಾನೆ. ಹೀಗೆ ಈ ಮೂರು ಪದ್ಯಗಳ ಕೊನೆಯಲ್ಲಿ ತನ್ನ ಬನವಾಸಿ ದೇಶದ ವರ್ಣನೆಯನ್ನಷ್ಟೇ ಮಾಡದೆ, ಅದರಲ್ಲಿ ತಾನು ಒಂದಾಗುವ ಅಭಿಲಾಷೆಯನ್ನು ವ್ಯಕ್ತಪಡಿಸಿದ್ದಾನೆ.

(ಲೇಖನವನ್ನು ಬರೆಯುವ ಮೊದಲು ಗೆಳತಿ ಮೀನಾರಾವ್ ಜೊತೆಗೆ ಈ ಕುರಿತು ಮಾತನಾಡಿದಾಗ ಹೊಳೆದ ಅಂಶವನ್ನು ಬಳಸಿಕೊಂಡಿದ್ದೇನೆಂದು ಕೃತಜ್ಞತೆಯಿಂದ ಸ್ಮರಿಸುತ್ತೇನೆ.)

**ಅಡಿಟಿಪ್ಪಣಿ :**

೧. ಕರ್ನಾಟಕ ಲೋಚನ ಜೂನ್-೯೩ ಸಂ.-೬, ಸಂ.-೧, ಪು.-೪೧.

೨. ಕರ್ನಾಟಕ ಲೋಚನ ಡಿಸೆಂಬರ್-೯೩, ಸಂ.-೬ ಸಂ.-೨, ಪು.-೭೬.

೩. ಕರ್ನಾಟಕ ಲೋಚನ ಜೂನ್-೯೫, ಸಂ.-೮, ಸಂ.-೧, ಪು.-೪೭

* * *

# ೨. ಶ್ರೀ ಪಾರ್ಥಸಾರಥಿ ಕೀರ್ತನಂ- ಭಗವದ್ಗೀತಾರ್ಥ ಪ್ರತಿಪಾದಕಂ :

## ಕೆಲವು ಸಂಗತಿಗಳು

*-ಪ್ರೊ॥ ಜಿ. ಅಶ್ವತ್ಥನಾರಾಯಣ*

ಡಿ.ವಿ.ಜಿ. ಅವರ ಶ್ರೀಮದ್ಭಗವದ್ಗೀತಾ ತಾತ್ಪರ್ಯ ಅಥವಾ ಜೀವನ ಧರ್ಮಯೋಗ ಬಹಳ ಜನಪ್ರಿಯ ಗ್ರಂಥ. ಹಲವಾರು ಮುದ್ರಣಗಳನ್ನು ಕಂಡ ಗ್ರಂಥ. ಮಂಕುತಿಮ್ಮನಕಗ್ಗದ ನಂತರ ಜನಪ್ರಿಯತೆಯಲ್ಲಿ ಇದರ ಸ್ಥಾನವಿದೆ ಎನ್ನಬಹುದು.

೨೬-೮-೧೯೬೨ ರಿಂದ ೮-೫-೧೯೬೩ರ ವರೆಗೆ ಗೀತೆಯ ಒಂದೊಂದು ಅಧ್ಯಾಯವನ್ನು ಅಥವಾ ಅಧ್ಯಾಯಖಂಡವನ್ನು ತೆಗೆದುಕೊಂಡು ಮುಖ್ಯಾಂಶಗಳಿಗೆ ಹೆಚ್ಚು ಗಮನಕೊಟ್ಟು ಶ್ಲೋಕ ಶ್ಲೋಕವಾಗಿ ಅಧ್ಯಯನ ಮಾಡಿದ ವಿಚಾರಗಳನ್ನು ಪುನರಾವರ್ತನೆ ಮಾಡಿದ ಉಪನ್ಯಾಸಗಳ ಸಂಗ್ರಹ ಈ ಗ್ರಂಥ.

ಈ ಬಾಯಿಮಾತಿನ ಗ್ರಂಥ ಲೇಖನಗಳಾಗಿ ಪ್ರಜಾಮತ ವಾರಪತ್ರಿಕೆಯಲ್ಲಿ ಪ್ರಕಟವಾದದ್ದು ಪುಸ್ತಕವಾಗಿ ೧೯೬೫ ರಲ್ಲಿ ಪ್ರಥಮ ಬಾರಿಗೆ ಕಾವ್ಯಾಲಯದಿಂದ ಪ್ರಕಟವಾಯಿತು.

ಗ್ರಂಥವಾಗಿ ಪ್ರಕಟವಾದ ಮೊದಲ ಮುದ್ರಣದಲ್ಲಿ ಹಲವು ಪರಿಶಿಷ್ಟ ಭಾಗಗಳು ಸೇರಿಕೊಂಡವು. (೧) ಮತತ್ರಯ ವಿಚಾರ (೨) ಅಧ್ಯಾರೋಪ-ಅಪವಾದ (೩) ಭಕ್ತಿ ಕರ್ಮ ಜ್ಞಾನ (೪) ಮೋಕ್ಷ ಸುಖ (೫) ಮತಧರ್ಮವೋ ಮದ್ದೀಡೋ? (೬) ಕಾಲ ಸ್ವರೂಪ (೭) ಗೀತೆಯ ಗೇಯತ್ವ (೮) ಭಗವದ್ಗೀತಾ-ರಾಮಕಥಾ ಸಮನ್ವಯ ಮತ್ತು ಪ್ರಾರಂಭದಲ್ಲಿ ಶ್ರೀ ಪಾರ್ಥಸಾರಥಿ ಕೀರ್ತನಂ ಸೇರಿಕೊಂಡಿತು. ಎರಡನೆಯ ಮುದ್ರಣದಲ್ಲಿ ಶ್ರೀ ಪಾರ್ಥಸಾರಥಿ ಕೀರ್ತನೆ ಗ್ರಂಥದ ಪ್ರಾರಂಭದಲ್ಲಿದ್ದುದು ಪರಿಶಿಷ್ಟದ ಭಾಗವಾಗಿ ಸೇರಿಕೊಂಡಿತು.

ಶ್ರೀ ಪಾರ್ಥಸಾರಥಿ ಕೀರ್ತನಂ ತಮಗೆ ದೊರೆತ ಬಗೆಯನ್ನು ಡಿ.ವಿ.ಜಿ. ಪೀಠಿಕೆಯಲ್ಲಿ ಹೀಗೆ ತಿಳಿಸಿದ್ದಾರೆ.

ಗೀತೋಪದೇಶದ ಸಾರಾಂಶವನ್ನು ಒಳಗೊಂಡಿರುವ ಈ ಸಂಸ್ಕೃತ ಭಾಷೆಯ ಹಾಡು ಸುಮಾರು ೬೦ ವರ್ಷಗಳಿಂದ ನನ್ನ ಒಂದು ಜ್ಞಾಪಕ ಪುಸ್ತಕದಲ್ಲಿ ಇದ್ದುಕೊಂಡಿದೆ. ಅದನ್ನು ರಚಿಸಿದವರು ಯಾರೋ, ಎಲ್ಲಿಯವರೋ, ಯಾವ ಕಾಲದವರೋ ತಿಳಿಯುವುದು ಈಗ ಅಸಾಧ್ಯವಾಗಿದೆ. ನನ್ನ ಬಾಲ್ಯದಲ್ಲಿ ನಮ್ಮ ಮನೆಗೆ ಬರುತ್ತಿದ್ದ ಒಬ್ಬಾನೊಬ್ಬ ಹಿರಿಯರು ಹೇಳಿದ್ದನ್ನು ನಾನು ಬರೆದಿಟ್ಟುಕೊಂಡಿದ್ದು ಇದು, ಅವರು ಯಾರೆಂಬುದು ಈಗ ನೆನಪಿನಿಂದ ಜಾರಿ ಹೋಗಿದೆ. ಇದು ಬಹು ಪ್ರಾಚೀನ ಕೃತಿ ಎಂದವರು ಹೇಳಿದ್ದು ನನಗೆ ಜ್ಞಾಪಕದಲ್ಲಿ ಇದೆ.

ಈ ಗೀತೆ ಹಾಡಿನ ರೂಪದಲ್ಲಿರುವುದರ ಬಗ್ಗೆ ಡಿ.ವಿ.ಜಿ. ಅವರು ಹೇಳುವ ಮಾತಿದು "ಗೀತೆಯ ವಿಷಯವು ಗಾನಯೋಗ್ಯವಾದದ್ದು ಎಂಬುದು ಪುರಾತನರ ಅಭಿಪ್ರಾಯವೆಂಬುದು ಇದರಿಂದ ಸ್ಪಷ್ಟವಾಗಿದೆ. ಗೀತೆಯಲ್ಲಿ ಶಾಸ್ತ್ರಾಂಶ ಮತ್ತು ಕಾವ್ಯಾಂಶ ಎರಡೂ ಸೇರಿವೆಯಲ್ಲವೇ?

ಗೀತೆಯನ್ನು ಬುದ್ಧಿಯೆಂಬ ಅಂತಃಕರಣದ ದ್ವಾರಾ ಗ್ರಹಿಸುವವರಿಗೆ ತರ್ಕದ ದಾರಿ ಸರಿ; ಹೃದಯವು ಜನತಾ ಸಾಮಾನ್ಯದ ದಾರಿ-ನೂರು ಮಂದಿಯಲ್ಲಿ ತೊಂಬತ್ತರ ದಾರಿ. ಅದರ ಪ್ರಯೋಜನಕ್ಕಾಗಿ ಈ ಗೀತಾ ಕೀರ್ತನೆ.

ಈ ಕೀರ್ತನೆಯಲ್ಲಿ ಮೂಲ ಭಗವದ್ಗೀತೆಯ ಸಾಲುಗಳು ಸೇರ್ಪಡೆ ಆಗಿರುವುದನ್ನು ಗುರುತಿಸಿರುವ ಡಿ.ವಿ.ಜಿ. ಅವರು ಇದರ ರಚಕರು ಮೋಹನರಾಗೇಣ ಗೀಯತೇ ಎಂದು ಹೇಳಿದ್ದನ್ನು ಸಮರ್ಥಿಸಿದ್ದಾರೆ. "ಮೋಹನರಾಗವು ಇದರ ಭಾವಕ್ಕೆ ಒಪ್ಪುತ್ತದೆ. ಅದು ಬೇಗ ಮನಸ್ಸನ್ನು ಕರಗಿಸುವ ಶಕ್ತಿಯುಳ್ಳ ರಾಗ. ತ್ಯಾಗರಾಜ , ಪುರಂದರಾದಿ ಭಕ್ತ ಗಾಯಕರು ಮೋಹನ ರಾಗವನ್ನು ಆರಿಸಿಕೊಂಡಿದ್ದಾರೆ. ಪೂರ್ವಿಕರಲ್ಲಿ ಅದು ಜನಪ್ರಿಯವಾಗಿ ಸರ್ವಸುಲಭವಾಗಿದ್ದ ರಾಗವೆಂದು ನನಗಿರುವ ಹಿಂದಿನ ಕಾಲದ ಅನುಭವದಿಂದ ತೋರುತ್ತದೆ.

ಮತ್ತೆ ತಾವೇ ಬೇರೆ ಬೇರೆ ರಾಗಗಳಲ್ಲಿ ಈ ಕೀರ್ತನೆಯನ್ನು ಹಾಡಲು ಸೂಚಿಸಿದ್ದಾರೆ. ಆರಭಿ (ನುಡಿ ೩-೪), ಮುಖಾರಿ (ನುಡಿ ೫-೬), ಶಂಕರಾಭರಣ (೭-೮), ವರಾಳಿ (ನುಡಿ ೯-೧೦), ಆನಂದಭೈರವಿ (೧೧-೧೨) ಮಾಯಾಮಾಳವಗೌಳ (೧೩-೧೪), ಸುರಟಿ (೧೫-೧೬), ಕಲ್ಯಾಣಿ (೧೭-೧೮), ಧನ್ಯಾಸಿ (೧೯-೨೦), ಅಠಾಣ (೨೧-೨೨), ಕಾಂಭೋಜಿ (೨೩-೨೪), ಪೂರ್ವಿ ಕಲ್ಯಾಣಿ (೨೫-೨೬), ಯದುಕುಲ ಕಾಂಭೋಜಿ (೨೭-೨೮), ಮಧ್ಯಮಾವರ್ತಿ (೨೯-೩೦)ಹೀಗೆ ೩೦ ನುಡಿಗಳಿಗೆ ೧೮ ರಾಗಗಳನ್ನು ಸೂಚಿಸಿದ್ದಾರೆ. ಆದರೆ ಇದೇ ರಾಗಗಳನ್ನು ಬಳಸಬೇಕು ಎಂದು ಅವರು ಒತ್ತಾಯ ಮಾಡಿಲ್ಲ. ಈ ಅನುಭವದಂತೆ ಬೇರೆ ರಾಗಗಳೂ ಆಗಬಹುದು. ರಾಗದ ಗತಿರೀತಿಗಳು ಭಕ್ತಿ-ಧ್ಯಾನಗಳಿಗೆ ಅನುಕೂಲವಾಗಿರಬೇಕು" ಎಂದಿದ್ದಾರೆ.

ಈ ಕೀರ್ತನೆಯ ಮೂಲ ಮತ್ತು ಪಾಠಾಂತರಗಳನ್ನು ಕುರಿತು ಕೆಲವು ಹೊಸ ಸಂಗತಿಗಳನ್ನು ಇಲ್ಲಿ ಪರಿಚಯಿಸಿದೆ.

ಮೊದಲನೆಯದಾಗಿ ೧೯ನೇ ಶತಮಾನದ ಕೊನೆಯ ಭಾಗದಲ್ಲಿ ೨೦ನೇ ಶತಮಾನದ ಆದಿ ಭಾಗದಲ್ಲಿ ಬಹು ಜನಪ್ರಿಯವಾಗಿ ಜನರ ಬಾಯಲ್ಲಿ ಇದ್ದ ಕೀರ್ತನೆ. ಎಸ್. ಜಿ. ನರಸಿಂಹಾಚಾರ್ಯರು ಮತ್ತು ಮ. ಆ. ರಾಮಾನುಜಯ್ಯಂಗಾರ್ಯರು ಸಂಪಾದಿಸುತ್ತಿದ್ದ ಕರ್ಣಾಟಕ ಕಾವ್ಯ ಕಲಾನಿಧಿ ಗ್ರಂಥ ಮಾಲಿಕೆಯಲ್ಲಿ ೧೬ನೇ ಕುಸುಮವಾಗಿ ೧೯೦೫ರಲ್ಲಿ ಮೈಸೂರಿನ ಜಿ.ಟಿ.ಎ. ಪ್ರೆಸ್ಸಿನಲ್ಲಿ ಕನ್ನಡ ಟೀಕೆ ಸಮೇತ ಅಚ್ಚಾಗಿದೆ. ಇದರ ಹೆಸರು ಶ್ರೀ ಪಾರ್ಥಸಾರಥಿ ಕೀರ್ತನಂ ಎಂದಿಲ್ಲ "ಭಗವದ್ಗೀತಾರ್ಥ ಪ್ರತಿಪಾದಕ ಕೀರ್ತನಂ" ಎಂದಿದೆ. ಕರ್ನಾಟಕ ಭಾಷಾ ಟೀಕಾ ಸಮೇತ ಪ್ರಕಟವಾಗಿದೆ. ಟೀಕೆ ಬರೆದವರು ಯಾರೋ ತಿಳಿದಿಲ್ಲ. ಇದರಲ್ಲೂ ೩೦ ನುಡಿಗಳಿವೆ. ಗಮನಾರ್ಹ ವ್ಯತ್ಯಾಸಗಳಿಲ್ಲ. ಆದರೆ ಪಾಠಾಂತರಗಳಿವೆ.

ನುಡಿ ೪ : ಅಷ್ಟಾಪದಾಷ್ಟಾರಿ (ಅಷ್ಟಾಪದಾಷ್ಟಾರ).

ನುಡಿ ೬ : ಮಾಂ ತ್ವಾಂ ಪ್ರಪನ್ನಂ ಭೋ-ರಿತ್ಯುಕ್ತಂ ಸವಿನಯಂ
(ಮಾಂ ತ್ವಾಂ ಪ್ರಪನ್ನಂ ಇತ್ಯುಕ್ತಂ ಸವಿನಯಂ)

ನುಡಿ ೯ : ನಾऽऽಸಂ ನ ತ್ವಂನೇಮೇ (ನಾಸಂ ನತ್ವಂ ನೇಮೇ)

ನುಡಿ 18 : ಭಜ ಮಾಮಸ್ಮಿನ್ ಲೋಕೇ । ಅಸುಖೇ ಅನಿತ್ಯೇ
(ಅನಿತ್ಯಮಸುಖಂ ಲೋಕ । ಮಿಮಂ ಪ್ರಾಪ್ಯ ಭಜಮಾಂ)

ನುಡಿ 21 : ನಿರ್ಮಾನಿತ್ವಮದಂಭಿ-ತ್ವಮಹಿಂಸಾಕ್ಷಾಂತಿಶ್ಚ
(ಅಮಾನದಂಭ ಭಾವೋಽಹಿಂಸಾಕ್ಷಾನ್ತಿಶ್ಚ

ನುಡಿ 30 : ಕೊನೆಯಲ್ಲಿ ಇರುವ ಸಾಲು ಇದು :
ಭಜ ಪಾರ್ಥ ಸಾರಥಿಮ್ ಆಯಿಚಿತ್ತ ಶರಣಂ

॥ ಸರ್ವಂ ಶ್ರೀ ಕೃಷ್ಣಾರ್ಪಿತಂ ॥

(ಭಗವದ್ಗೀತಾರ್ಥ ಪ್ರತಿಪಾದಕ ಕೀರ್ತನಂ ಸಂಪೂರ್ಣಂ)

(ಆವರಣ ಚಿಹ್ನೆಯಲ್ಲಿರುವ ಪಾಠಗಳು ಕಾವ್ಯ ಕಲ್ಪಾನಿಧಿ ಮುದ್ರಣದ ಪಾಠಗಳು)

ಅಷ್ಟೇನೂ ಪಾಠ ವ್ಯತ್ಯಾಸವಿಲ್ಲದೆ ಅಚ್ಚಾದ ಈ ಪ್ರತಿ 1912 ರಲ್ಲಿ ಅಚ್ಚಾದುದನ್ನು ಯಾರೋ ಬಾಯಿಪಾಠಮಾಡಿದವರು ಹೇಳಿದ್ದನ್ನು ಡಿ.ವಿ.ಜಿ. ಅವರು ಬರೆದುಕೊಂಡಿರಲೂ ಸಾಧ್ಯ. ಅಥವಾ ಅವರು ಬೇರೆ ಮೂಲದಿಂದ ಎಂದರೆ ಅವರ ಹಿರಿಯರು ಹೇಳಿಕೊಟ್ಟ ಪಾಠವೂ ಆಗಿರಬಹುದು. ಅದೇನೇ ಇರಲಿ, ಇದಕ್ಕೆ ಟೀಕೆಯೂ ಇರಬೇಕಾದರೆ ಇದು ಸಾಕಷ್ಟು ಪ್ರಚಾರದಲ್ಲಿದ್ದ ಕೀರ್ತನೆ ಆಗಿತ್ತು. ಕೊನೆಯಲ್ಲಿ ಶ್ರೀನಿವಾಸನ ಸ್ತುತಿ ಇರುವುದರಿಂದ ವೆಂಕಟೇಶ್ವರನ ಭಕ್ತರು ರಚಿಸಿದಂತೆ ಕಾಣುತ್ತದೆ. ರಾಮಾನುಜ ಅಯ್ಯಂಗಾರರ ಪರಿಚಯವಿದ್ದ ಡಿ.ವಿ.ಜಿ. ಅವರ ಕಣ್ಣಿಗೆ ಈ ಪ್ರತಿ ಕಣ್ಣಿಗೆ ಬೀಳದಿದ್ದುದು ಅಚ್ಚರಿ ಎನ್ನಬಹುದು. ಏನೇ ಆದರೂ ಈಗಿನ ತಲೆಮಾರಿಗೆ ಈ ಕೀರ್ತನೆಯನ್ನು ನೆನಪಿಸಿದ ಕೀರ್ತಿ ಡಿ.ವಿ.ಜಿ. ಅವರಿಗೆ ಸೇರತಕ್ಕದ್ದು. ಮತ್ತೊಂದು ವಿಚಾರವೆಂದರೆ ಡಿ.ವಿ.ಜಿ. ಅವರು ರಾಗಮಾಲಿಕೆಯಾಗಿ ಹಾಡಬಹುದು ಎಂಬ ಸೂಚನೆಯೊಂದಿಗೆ 17 ರಾಗಗಳ ಸೂಚನೆ ನೀಡಿರುವುದು ಅವರ ಕೊಡುಗೆ ಆಗಿದ್ದು ಸಂಗೀತಗಾರರಿಗೆ ವರವಾಗಿದೆ.

## ೩. ಸಾಹಿತ್ಯ ಜಗತ್ತಿನ ಅದ್ಭುತ : 'ಸಿರಿ ಭೂವಲಯ'

*ಡಾ॥ ಪಿ. ವಿ. ನಾರಾಯಣ*

ಕುಮುದೇಂದು ಮುನಿಯಿಂದ ರಚಿತವಾಗಿರುವ 'ಸಿರಿ ಭೂವಲಯ' ಒಂದು ಸಾಹಿತ್ಯಿಕ ವಿಸ್ಮಯ. ಹದಿಮೂರನೇ ಶತಮಾನದಲ್ಲಿದ್ದ ಕನ್ನಡದಲ್ಲಿ ಜೈನ ಪರಂಪರೆಯ ರಾಮಾಯಣ ಕಾವ್ಯದ ಕರ್ತೃವಾದ ಮತ್ತೊಬ್ಬ ಕುಮುದೇಂದು ಇದ್ದಾನೆ. ಆದರೆ ಆತನಿಗೂ ಈತನಿಗೂ ಸಂಬಂಧವಿಲ್ಲ. ಈ ಕಾವ್ಯವು ಕ್ರಿ.ಶ. ಎಂಟನೆಯ ಶತಮಾನದಷ್ಟು ಪ್ರಾಚೀನವಾದದ್ದೆಂದು ಕೆಲವರು ಪ್ರತಿಪಾದಿಸಿದರೂ ಇಲ್ಲಿ ಬಳಕೆಯಾದ ನಡುಗನ್ನಡ ಭಾಷೆ ಮತ್ತು ಸಾಂಗತ್ಯದ ಛಂದಸ್ಸನ್ನು ಗಮನಿಸಿದರೆ ಇದು ಅಷ್ಟು ಹಳೆಯದಲ್ಲವೆಂದು ತೋರುತ್ತದೆ. ಪ್ರಾಯಶಃ ಹದಿನೈದು ಹದಿನಾರನೇ ಶತಮಾನಕ್ಕೆ ಸೇರಿದ ಕಾವ್ಯವಾಗಿರಬೇಕು. ಆದರೆ ಇದು ನೇರವಾಗಿ ಯಾವ ಲಿಪಿಯಲ್ಲಿಯೂ ಬರೆದ ಗ್ರಂಥವಲ್ಲ; ಇಲ್ಲಿನದು ಅಂಕಲಿಪಿ. ಇದರ ಆಳ-ಅಗಲಗಳನ್ನು ನಾಪಿಸ್ನೂ ಸಂಶೋಧನೆ ಮಾಡಿ ತಿಳಿಯಬೇಕಾಗಿದೆ. ಈಗ ನಡೆದಿರುವುದು ಹರಗು ಮಾಡುವ ಕೆಲಸ, ಅಷ್ಟೆ. ಈಗ ಗುರುತಿಸಿರುವ ಈ ಗ್ರಂಥದ ವೈಶಿಷ್ಟ್ಯಗಳನ್ನು ಅರಿತರೆ, ಮೇಲೆ ಹೇಳಿದ ಮಾತಿನ ಅರ್ಥ ತಿಳಿಯುತ್ತದೆ.

ಈ ಗ್ರಂಥದಲ್ಲಿ ಮೂರು ನೆಲೆಗಳಿವೆ : ಅಂಕ, ಭಾಷೆ ಮತ್ತು ವಿಷಯ. ಇದರ ಮೂಲ ನೆಲೆಯೇ ಅಂಕವು ; ಇದರ ರಚನೆಯಾಗಿರುವುದು ಅಂಕಲಿಪಿಯಲ್ಲಿ. ಅಂದರೆ

ಅದೇ ಬೇರೆ ಎಂದರ್ಥವಲ್ಲ. ಈ ಗ್ರಂಥಕರ್ತೃವು ಒಂದು ಹೊಸ ಬಗೆಯ ಪ್ರಯೋಗ ಮಾಡಿದ್ದಾನೆ. ಕನ್ನಡದ ಪ್ರತಿ ವರ್ಣಕ್ಕೂ ಒಂದು ಅಂಕದ ಸಂಕೇತವಿದೆ. ಒಂಬತ್ತು ಸ್ವರಗಳ ಮೂರು ರೂಪಗಳು - ಹ್ರಸ್ವ, ದೀರ್ಘ ಮತ್ತು ಪ್ಲುತ (ಎಂದರೆ, ಒಂದು ಮಾತ್ರೆಯ ಉಚ್ಚಾರಕಾಲ. ಎರಡು ಮಾತ್ರೆಯ ಉಚ್ಚಾರ ಕಾಲ ಹಾಗೂ ಮೂರು ಮಾತ್ರೆಯ ಉಚ್ಚಾರ ಕಾಲ). ಇಪ್ಪತ್ತೈದು ವರ್ಗೀಯ ವ್ಯಂಜನಗಳು. ಎಂಟು ಅವರ್ಗೀಯ ವ್ಯಂಜನಗಳು ಹಾಗೂ ಅನುಸ್ವಾರ, ವಿಸರ್ಗ, ಜಿಹ್ವಾಮೂಲೀಯ ಮತ್ತು ಉಪಧ್ಮಾನೀಯ-ಹೀಗೆ ಅರವತ್ತನಾಲ್ಕು ಧ್ವನಿಗಳಿಗೆ ಒಂದರಿಂದ ಅರವತ್ತನಾಲ್ಕು ಸಂಖ್ಯೆಗಳನ್ನು ಕ್ರಮವಾಗಿ ಸಂಕೇತವಾಗಿ ಇಲ್ಲಿ. ನಿಗದಿಪಡಿಸಲಾಗಿದೆ. ಈ ನೆಲೆಯ ಮೇಲೆ ಅದ್ಭುತ ಕಟ್ಟಡವನ್ನು ರಚಿಸಲಾಗಿದೆ. ಈ ಗ್ರಂಥವಿರುವುದು ೧೨೭೦ ಚಕ್ರಗಳಲ್ಲಿ; ಪ್ರತಿ ಚಕ್ರವೂ ಅಡ್ಡಡ್ಡಲಾಗಿ ಇಪ್ಪತ್ತೇಳು ಮತ್ತು ಮೇಲೆ-ಕೆಳಗೆ ಇಪ್ಪತ್ತೇಳು. ಒಟ್ಟು ೭೨೯ ಮನೆಗಳ ಕೋಷ್ಟಕ. ಪ್ರತಿಯೊಂದರಲ್ಲೂ ಒಂದು ಸಂಖ್ಯೆ. ಮೇಲೆ ವಿವರಿಸಿದ ಕನ್ನಡ ವರ್ಣ ಗಳಿಗೆ ನೀಡಿದ ಒಂದರಿಂದ ಅರವತ್ತನಾಲ್ಕರವರೆಗಿನ ಸಂಖ್ಯಾ ಸಂಕೇತ. ಇವುಗಳನ್ನು ಬೇರೆ ಬೇರೆ ಮಾರ್ಗಗಳಲ್ಲಿ ಅನುಸರಿಸಿದರೆ ದೊರೆಯುವ ವರ್ಣಗಳ ಅನುಕ್ರಮದಲ್ಲಿ ಗ್ರಂಥರಚನೆಯಿದೆ; ಅಂದರೆ, ಸಂಖ್ಯೆಯು ಸಂಕೇತಿಸುವ ವರ್ಣವನ್ನಾಗಿ ಪರಿವರ್ತನೆ ಮಾಡಿಕೊಂಡರೆ ಭಾಷಾರೂಪದ ರಚನೆ ದೊರೆಯುತ್ತದೆ. ಒಂದೊಂದು ಚಕ್ರದ್ದೂ ಬೇರೆ ಬೇರೆ ಬಗೆ. ಅಲ್ಲದೆ, ಹೀಗೆ ಅಕ್ಷರಗಳಾಗಿ ಪರಿವರ್ತನೆ ಮಾಡಿಕೊಂಡ ಮೇಲೆ ವಿವಿಧ ಮಾರ್ಗಗಳನ್ನು ಅನುಸರಿಸಿದರೆ ಬೇರೆ ಬೇರೆ ಭಾಷೆಗಳಲ್ಲಿನ ಪದ್ಯರೂಪವು ದೊರೆಯುತ್ತದೆ. ಉದಾಹರಣೆಗೆ, ಮೊದಲ ಅಧ್ಯಾಯದಲ್ಲಿ ಒಂಬತ್ತು ಚಕ್ರಗಳಿವೆ. ಅವುಗಳ ಮೊದಲನೆಯದರಲ್ಲಿ. ಮೊದಲ ಸಾಲಿನ ಹದಿನಾಲ್ಕನೆಯ ಅಂಕದಿಂದ ಆರಂಭಿಸಿ ಮೂಲೆ ಮೂಲೆಯಾಗಿ ಮುಂದುವರಿದರೆ, ಕನ್ನಡದ ಸಾಂಗತ್ಯ ಪದ್ಯಗಳು ಸಿಕ್ಕುತ್ತವೆ. ಹೀಗೆ ದೊರೆತ ಪ್ರತಿ ಪದ್ಯದ ಮೊದಲ ಅಕ್ಷರಗಳನ್ನು ಜೋಡಿಸಿಕೊಂಡು ಓದಿದರೆ ಪ್ರಾಕೃತ ಶ್ಲೋಕ ದೊರೆಯುತ್ತದೆ. ಕನ್ನಡ ಪದ್ಯಗಳ ಬೇರೆ ಬೇರೆ ಅಕ್ಷರಗಳನ್ನು ಜೋಡಿಸಿಕೊಂಡರೆ ಸಂಸ್ಕೃತಶ್ಲೋಕ ಸಿಕ್ಕುತ್ತದೆ. ಪ್ರತಿ ಅಧ್ಯಾಯದ ಕಡೆಯಲ್ಲಿ ಗ್ರಂಥಕರ್ತೃವೇ ಆಯಾ ಅಧ್ಯಾಯದಲ್ಲಿರುವ ಒಟ್ಟು ಶಬ್ದಗಳ ಸಂಖ್ಯೆಯನ್ನು ಸೂಚಿಸುತ್ತಾನೆ. ಹೀಗೆ ಮೊದಲ ಅಧ್ಯಾಯದ ಎಲ್ಲ ಚಕ್ರಗಳನ್ನೂ ಓದಿದರೆ, ೫೩ ಪೂರ್ಣ ಕನ್ನಡ ಪದ್ಯಗಳೂ, ೭೨ ಪದ್ಯಪಾದಗಳೂ ದೊರೆಯುತ್ತವೆ. ಮೊದಲ ಅಧ್ಯಾಯದಲ್ಲಿ ಆದಿ ವೃಷಭನು ತನ್ನ ಒಬ್ಬ ಮಗಳು ಬ್ರಾಹ್ಮಿಗೆ ಅಕ್ಷರವನ್ನೂ, ಇನ್ನೊಬ್ಬ ಮಗಳು ಸೌಂದರಿಗೆ ಅಂಕಿಜ್ಞಾನವನ್ನೂ ನೀಡಿದಂತೆಯೂ, ಗಂಡುಮಕ್ಕಳಾದ ಭರತ-ಗೊಮ್ಮಟರಿಗೆ ಈ ಕಾವ್ಯವನ್ನು ಚಕ್ರಬಂಧದಲ್ಲಿ ಕಟ್ಟಿ ಹೇಳಿದಂತೆಯೂ ನಿರೂಪಿತವಾಗಿದೆ; ಅಲ್ಲದೆ, ಇದರಲ್ಲಿ ತಾವರೆಯಿಂದ ರಸಸಿದ್ಧಿ ಮಾಡುವ ವಿವರಣೆಯಿದೆಯಂತೆ.

ಗ್ರಂಥ ಕರ್ತೃವಿನ ಪ್ರಕಾರ ಇದರಲ್ಲಿ ಹದಿನೆಂಟು ಮುಖ್ಯ ಭಾಷೆಗಳೂ, ಏಳುನೂರು ಸಾಮಾನ್ಯ ಭಾಷೆಗಳೂ ಅಡಕಗೊಂಡಿವೆಯಂತೆ. "ಭೂವಲಯದೊಳೇಳ್ನೂರ ಹದಿನೆಂಟು ಸರಸಭಾಷೆ ಗಳವತಾರ" ಎಂದು ಕವಿಯೇ ಹೇಳಿಕೊಳ್ಳುತ್ತಾನೆ. ಹಾಗಾಗಿ ತನ್ನ ಭಾಷೆಯನ್ನು ಕವಿ "ಸರ್ವಭಾಷಾಮಯೀ ಕರ್ಮಾಟ" ಎಂದು ಬಣ್ಣಿಸಿಕೊಳ್ಳುತ್ತಾನೆ. (ಕರ್ನಾಟಕ ಎಂಬುದಕ್ಕೆ ಕರ್ಮಾಟ ಎಂದೂ, ಕನ್ನಡ ಎಂಬುದಕ್ಕೆ ಕಮ್ಮಡ ಎಂದೂ ಕರೆಯುವ ಇಲ್ಲಿನ ರೀತಿ ಕುತೂಹಲ

ಕೆರಳಿಸುತ್ತದೆ). ಕವಿಗೆ ಕನ್ನಡದ ಬಗ್ಗೆ ವಿಶೇಷ ಅಭಿಮಾನ; ಅದರ ಅಕ್ಷರಸೌಂದರ್ಯದ ಬಗ್ಗೆ ಇನ್ನಿಲ್ಲದ ಹೆಮ್ಮೆ. ಕನ್ನಡದ ಅಂಕಿಗಳ ಸ್ವರೂಪವನ್ನು ಹೇಳಿರುವ ಬಗೆ ಕೌತುಕಪೂರ್ಣವಾಗಿದೆ. ಸೊನ್ನೆಯನ್ನು ಅರ್ಧಕ್ಕೆ ಸೀಳಿ ಆ ಎರಡು ಹೋಳುಗಳನ್ನು ಬೇರೆ ಬೇರೆ ರೀತಿಯಲ್ಲಿ ಜೋಡಿಸಿದರೆ ಒಂದರಿಂದ ಒಂಬತ್ತು ಅಂಕಿಗಳು ಸಿದ್ಧಿಸುತ್ತವೆ. 'ಸಿರಿ ಭೂವಲಯ'ವು ವಿಶ್ವಕೋಶದಂತಿರುವ ರಚನೆಯಾಗಿದೆ. ಇಲ್ಲಿನ ಒಟ್ಟು ಐವತ್ತಾರು ಅಧ್ಯಾಯಗಳಲ್ಲಿ ಸಮಾವೇಶಗೊಂಡಿವೆಯೆಂದು ಹೇಳಲಾದ ವಿಷಯಗಳ ಪಟ್ಟಿಯನ್ನು ನೋಡಿದರೆ ಮೂಗಿನ ಮೇಲೆ ಬೆರಳಿಡುವಂತಾಗುತ್ತದೆ. ನಾನಾ ಬಗೆಯ ಮೂಲ ಮತ್ತು ಆನ್ವಯಿಕ ವಿಜ್ಞಾನಗಳು, ಪ್ರಾಚೀನ ಸಾಹಿತ್ಯದ ವಸ್ತುಗಳು. ಧರ್ಮ-ದರ್ಶನಗಳು ಇನ್ನೂ ಮುಂತಾದವು ಸೇರಿವೆಯಂತೆ. ವೀರಸೇನಾಚಾರ್ಯರ ಜೈನಸಿದ್ಧಾಂತ ಗ್ರಂಥವಾದ 'ಷಟ್ಖಂಡಾಗಮ ಟೀಕೆ' ಎಂಬ ಒಂಬತ್ತನೇ ಶತಮಾನದ ಗ್ರಂಥವನ್ನು ಇದು ಆಧರಿಸಿದ್ದೆಂದು ಹೇಳಲಾಗಿದೆ.

'ಸಿರಿ ಭೂವಲಯ'ದ ಕರ್ತೃವಾದ ಕುಮುದೇಂದುವು ಕೋಲಾರ ಜಿಲ್ಲೆ ಚಿಕ್ಕಬಳ್ಳಾಪುರ ತಾಲ್ಲೂಕು ನಂದಿ ಬೆಟ್ಟದ ಬುಡದಲ್ಲಿರುವ ಯಲವಳ್ಳಿ ಎಂಬ ಗ್ರಾಮಕ್ಕೆ ಸೇರಿದವನಾಗಿರಬೇಕು. ಈ ಕವಿಯ ಬಗ್ಗೆ ದೇವಪ್ಪನೆಂಬುವವನು 'ಕುಮುದೇಂದು ಶತಕ'ವೆಂಬ ಸಂಸ್ಕೃತ ಕೃತಿಯನ್ನು ರಚಿಸಿದ್ದಾನೆ. ಕುಮುದೇಂದುವು ಜೈನಮುನಿಯಾಗಿದ್ದಂತೆ ತೋರುತ್ತದೆ. ಈಗ ಸಿಕ್ಕಿರುವ ಹಸ್ತಪ್ರತಿಯು ಕವಿಯ ಸ್ವಹಸ್ತಾಕ್ಷರ ಪ್ರತಿಯಲ್ಲ; ಸೇನನೆಂಬ ದಂಡನಾಯಕನ ಹೆಂಡತಿಯಾದ ಮಲ್ಲಿಕಬ್ಬೆ ಎಂಬುವವಳು ಒಂದು ಕೃತಿಯ ಪ್ರತಿಯನ್ನು ಮಾಡಿಸಿ ಮಾಘನಂದಿ ಆಚಾರ್ಯರಿಗೆ ಶಾಸ್ತ್ರದಾನ ಮಾಡಿಸಿದಳೆಂದು ಕೆಲವು ವಿದ್ವಾಂಸರು ತಿಳಿಯುತ್ತಾರೆ; ಆದರೆ ಇದನ್ನು ಅಲ್ಲಗಳೆಯುವವರೂ ಇಲ್ಲದಿಲ್ಲ.

ಈ ಗ್ರಂಥದ ಬಗ್ಗೆ ತುಂಬ ಶ್ರಮವಹಿಸಿ ಕೆಲಸ ಮಾಡಿದವರಲ್ಲಿ ಮೊದಲಿಗರು ಪಂಡಿತ ಎಲ್ಲಪ್ಪಶಾಸ್ತ್ರಿಯವರು . ಇದರ ವೈಶಿಷ್ಟ್ಯಗಳ ಗಂಧವರಿತ ಶಾಸ್ತ್ರಿಗಳು ಆ ಗ್ರಂಥಕ್ಕಾಗಿ ಅದರ ಪ್ರತಿಯಿದ್ದ ಧರಣೇಂದ್ರ ಪಂಡಿತರೆಂಬುವವರ ತಮ್ಮನ ಮಗಳನ್ನೇ ಮದುವೆಯಾದರಂತೆ; ಆದರೆ ಧರಣೇಂದ್ರ ಪಂಡಿತರ ನಿಧನಾನಂತರ, ಅವರ ಮಕ್ಕಳಿಗೆ ತಮ್ಮ ಹೆಂಡತಿಯ ಚಿನ್ನದ ಬಳೆಗಳನ್ನು ಕೊಟ್ಟು ಹಸ್ತಪ್ರತಿಯನ್ನು ಪಡೆಯಬೇಕಾಯಿತಂತೆ. ಮುಂದೆ ಬಹಳ ದಿನಗಳ ಕಾಲ ಗ್ರಂಥದ ಕೋಷ್ಟಕವನ್ನು ಬಿಡಿಸುವ ಬಗ್ಗೆ ಯೋಚಿಸುತ್ತಿದ್ದರು; ಇದ್ದಕ್ಕಿದ್ದಂತೆ ಒಂದು ದಿನ ಆ ಮರ್ಮ ಅವರಿಗೆ ಹೊಳೆಯಿತಂತೆ. ೧೯೩೦ ರ ಹೊತ್ತಿಗೇ ಕರ್ಲಮಂಗಲಂ ಶ್ರೀಕಂಠಯ್ಯನವರು ಇವರ ಜೊತೆ ಸೇರಿ ಗ್ರಂಥದ ಬಗ್ಗೆ ಸಂಶೋಧನೆ ಪ್ರಕಟಣೆಗಳಿಗೆ ಸಹಕರಿಸಿದರು. ಇವರಿಬ್ಬರ ಅಪಾರ ಶ್ರಮದಿಂದಾಗಿ 'ಸಿರಿ ಭೂವಲಯ'ದ ಮೊದಲೆರಡು ಭಾಗಗಳು ಸಿದ್ಧವಾಗಿ ೧೯೫೩ರಲ್ಲಿ ಪ್ರಕಟವಾಯಿತು. ಮುಂದೆ ಕನ್ನಡ ಬೆರಳಚ್ಚು ಯಂತ್ರದ ಕೀಬೋರ್ಡ್ ತಯಾರಿಸಿದ ಕೆ. ಅನಂತಸುಬ್ಬರಾಯರು 'ಸಿರಿ ಭೂವಲಯ'ದ ಬಗ್ಗೆ ವ್ಯಾಪಕ ಪ್ರಚಾರ ಕಾರ್ಯ ಕೈಗೊಂಡರು. ಎಲ್ಲಪ್ಪಶಾಸ್ತ್ರಿಗಳು ೧೯೫೭ ರಲ್ಲಿಯೂ, ಕರ್ಲಮಂಗಲಂ ಶ್ರೀಕಂಠಯ್ಯನವರು ೧೯೬೫ ರಲ್ಲಿಯೂ ನಿಧನರಾದ ಮೇಲೆ ಈ ಗ್ರಂಥದ ಬಗೆಗಿನ ಸಂಶೋಧನೆಗೆ ಅಡ್ಡಿಯೊದಗಿತು. ಮೇಲಿನ ಮೂವರು ಮಹನೀಯರು ಅವಿರತವಾಗಿ

ಶ್ರಮಿಸಿದರೂ ಕನ್ನಡದ ಶ್ರೇಷ್ಠ ವಿದ್ವಾಂಸರಾರೂ ಇದರ ಬಗ್ಗೆ ಹೆಚ್ಚಿನ ಅಧ್ಯಯನಕ್ಕೆ ತೊಡಗದ್ದುದು ವಿಷಾದದ ಸಂಗತಿಯಾಗಿದೆ.

ಆದರೆ ಪಂಡಿತ ಎಲ್ಲಪ್ಪಶಾಸ್ತ್ರಿಗಳ ಕಾರ್ಯವನ್ನು ಗಮನಿಸುತ್ತಿದ್ದ ಅವರ ಮಗ ಎಂ. ವೈ. ಧರ್ಮಪಾಲ್ ಅವರು ತಮ್ಮ ತಂದೆಯ ಕಾರ್ಯವನ್ನು ಮುಂದುವರಿಸುವ ನಿರ್ಧಾರಕೈಗೊಂಡರು. ತಮ್ಮ ತಂದೆಯವರು ಸಂಪಾದಿಸಿದ್ದ ಹಸ್ತಪ್ರತಿಯನ್ನು ಸುರಕ್ಷಿತವಾಗಿ ಕಾಪಾಡಿಕೊಂಡು ಬಂದದ್ದಲ್ಲದೆ, ಅದರ ಕುರಿತಾಗಿ ಒಂದು ಕಿರು ಪರಿಚಯ ಗ್ರಂಥವನ್ನು ಪ್ರಕಟಿಸಿದರು. ಮುಂದೆ 'ಸಿರಿಭೂವಲಯ ಫೌಂಡೇಶನ್' ಸ್ಥಾಪಿಸಿ ನೋಂದಣಿ ಮಾಡಿಸಿದರು. ಅವರ ಕನಸಿಗೆ ಮೂರ್ತರೂಪವನ್ನು ಕೊಡುವಲ್ಲಿ ಬೆಂಗಳೂರು ವಿಮಾನ ಕಾರ್ಖಾನೆಯಲ್ಲಿ ಅವರ ಸಹೋದ್ಯೋಗಿಗಳಾಗಿದ್ದ ವೈ.ಕೆ. ಮೋಹನ್ ಅವರ ಉತ್ಸಾಹ ಸಹಾಯಕವಾಯಿತು. ಮೋಹನ್ ಅವರು ತಮ್ಮ 'ಪುಸ್ತಕಶಕ್ತಿ' ಪ್ರಕಾಶನದ ಮೂಲಕ ಇಡೀ ಗ್ರಂಥವನ್ನು ನಾಲ್ಕು ಸಂಪುಟಗಳಲ್ಲಿ ಹೊರತರುವ ಯೋಜನೆಯನ್ನು ಹಾಕಿಕೊಂಡಿದ್ದಾರೆ. ಇದೀಗ ಮೊದಲನೆಯ ಸಂಪುಟ ಪ್ರಕಟವಾಗಿದೆ. ಕ್ರೌನ್ ನಾಲ್ಕನೇ ಒಂದು ಆಕಾರದ ಸುಮಾರು ೪೮೦ ಪುಟಗಳ ಸುಂದರವಾಗಿ ಮುದ್ರಿತವಾಗಿರುವ ಗ್ರಂಥ ಇದು. ಇದರಲ್ಲಿ 'ಸಿರಿ ಭೂವಲಯ ದ' ಮೊದಲೆಂಟು ಅಧ್ಯಾಯಗಳು ಅಡಕವಾಗಿವೆ. ಮೊದಲ ಅಧ್ಯಾಯದಲ್ಲಿನ ೧೨೫ ಪದ್ಯಗಳಲ್ಲಿ ಕೃತಿಯ ವೈಶಿಷ್ಟ್ಯಗಳು ಉಕ್ತವಾಗಿವೆ; ಎರಡನೇ ಅಧ್ಯಾಯದ ೧೫೫ ಪದ್ಯಗಳಲ್ಲಿ ಅನೇಕ ಗಣಿತ ಸಮಸ್ಯೆಗಳ ಬಗ್ಗೆ ವಿವರಣೆಯಿದೆ; ೧೭೪ ಪದ್ಯಗಳಿರುವ ಮೂರನೆಯ ಅಧ್ಯಾಯವು ಮನುಷ್ಯದೇಹ ಮತ್ತು ಭೂಮಿಗಳ ನಡುವಣ ಸಂಬಂಧವು ಹೇಗೆ ಅನನ್ಯವಾದವು ಎಂಬುದನ್ನು ವಿವರಿಸುತ್ತದೆ; ನಾಲ್ಕನೆಯ ಅಧ್ಯಾಯದಲ್ಲಿನ ೧೮೫ ಪದ್ಯಗಳಲ್ಲಿ ಎಂಟು ಬಗೆಯ ಹೂಗಳ ರಸದಲ್ಲಿ ಪಾದರಸವನ್ನು ಬೆರೆಸಿದರೆ ಬರುವ 'ರಸಮಣಿಯ' ಬಗೆಗಿನ ವಿವರಣೆಯಿದೆ; ೨೦೧ ಪದ್ಯಗಳ ಐದನೆಯ ಅಧ್ಯಾಯವು ಭಾಷಾ ವರ್ಗೀಕರಣ, ವಿವಿಧ ಭಾಷೆಗಳ ಲಿಪಿಗಳು ಮುಂತಾದ ವಿವರಗಳು ಹಾಗೂ ನವಮಾಂಕ ಬಂಧ, ನವಮಾಂಕ ಮಹಿಮೆ ಮುಂತಾದ ವಿಷಯಗಳು ಮತ್ತು ಇಪ್ಪತ್ತನಾಲ್ಕು ತೀರ್ಥಂಕರರ ಹೆಸರುಗಳು ಉಲ್ಲೇಖಗೊಂಡಿವೆ; ೨೦೬ ರಷ್ಟು ಪದ್ಯಗಾತ್ರವುಳ್ಳ ಆರನೆಯ ಅಧ್ಯಾಯವು ದ್ವೈತ, ಅದ್ವೈತ, ಜೈನ ಮತ್ತು ಇತರ ಮತಗಳ ಸಮನ್ವಯ ವಿಷಯಕ್ಕೆ ಮೀಸಲಾಗಿದೆ; ಏಳನೆಯ ಅಧ್ಯಾಯದಲ್ಲಿ ೨೧೩ ಪದ್ಯಗಳಿದ್ದು. ಅದರಲ್ಲಿ ಸಿದ್ಧರಸದ ಮಹಿಮೆ ಮತ್ತು ಪುಷ್ಪಾಯುರ್ವೇದಗಳ ವಿಷಯ ವಿವರಣೆಗೊಂಡಿದೆ; ಹಾಗೂ, ಈ ಸಂಪುಟದ ಕೊನೆಯದಾದ ಎಂಟನೆಯ ಅಧ್ಯಾಯದಲ್ಲಿನ ೨೫೬ ಪದ್ಯಗಳು ವಿವಿಧ ತೀರ್ಥಂಕರರ ವಾಹನವಾದ ಸಿಂಹಗಳ ಆಕಾರ, ಸ್ವಭಾವ, ರೂಪಗಳನ್ನು ಗಣಿತಶಾಸ್ತ್ರದ ಪ್ರಕಾರ ವಿವರಿಸುತ್ತವೆ.

ಪುಸ್ತಕದ ಪ್ರಕಟಣೆಯಲ್ಲಿ ಕಂಪ್ಯೂಟರ್ ತುಂಬ ನೆರವಿಗೆ ಬರುತ್ತದೆ. ಏಕೆಂದರೆ, ಚಕ್ರಗಳಲ್ಲಿ ಬಳಕೆಯಾಗಿರುವ ಅರವತ್ತನಾಲ್ಕು ಅಂಕಿಗಳನ್ನು ಜೋಡಿಸುವ ಕ್ರಮ ಒಂದೊಂದರಲ್ಲೂ ನಿಯತವಾದದ್ದು; ಹಾಗಾಗಿ ಓದುವ ಕ್ರಮವನ್ನು ಪತ್ತೆ ಹಚ್ಚಿ ಕಂಪ್ಯೂಟರ್‌ಗೆ ಊಡಿದರೆ, ಅಷ್ಟರಮಟ್ಟಿಗೆ ಮಾನವಶ್ರಮ ಉಳಿಯುತ್ತದೆ. ಅಂದರೆ ಹಳೆತು-ಹೊಸತರ ಸಮಾವೇಶವನ್ನು ಈ ಗ್ರಂಥದ ಪ್ರಕಟಣೆ ಬೇಡುತ್ತದೆ. ತುಂಬ ಅಚ್ಚುಕಟ್ಟಾಗಿ ಈ ಸಂಪುಟ

ಮುದ್ರಣಗೊಂಡಿರಲು ಕಾರಣ ವೈ. ಕೆ. ಮೋಹನ್ ಅವರ ತಾಂತ್ರಿಕ ಪರಿಣತಿ. ಇವರ ಮತ್ತು ಸಂಪಾದಕ ಮಂಡಳಿಯ ಅವಿರತ ಪರಿಶ್ರಮದಿಂದಾಗಿ ಇಡಿಯಾಗಿ ಅನತಿ ಕಾಲದಲ್ಲೇ ಪುಸ್ತಕ ಪೂರ್ಣವಾಗಿ ಪ್ರಕಟಗೊಳ್ಳುವ ನಿರೀಕ್ಷೆಯಿದೆ. ಆದರೆ ಇದರ ಸಾರ್ಥಕ್ಯವಿರುವುದು ಕೃತಿಯ ಒಡಲಲ್ಲಿ ಹುದುಗಿದ ಹೂರಣದ ಬಗ್ಗೆ ವಿದ್ವಾಂಸರು ಸಂಶೋಧನ ಕಾರ್ಯವನ್ನು ಕೈಗೊಂಡಾಗ, ಇದಕ್ಕೆ ಒಂದು ಯುವ ವಿದ್ವಾಂಸ ತಂಡವು ಪರಿಣತರ ಮೇಲ್ವಿಚಾರಣೆಯಲ್ಲಿ ಕಾರ್ಯ ನಿರ್ವಹಿಸಬೇಕಾದ ಅವಶ್ಯಕತೆಯಿದೆ. ನಾಲ್ಕಾರು ಮಂದಿ ತಮ್ಮ ಪಿಎಚ್.ಡಿ. ಅಧ್ಯಯನಕ್ಕೆ ಈ ಗ್ರಂಥದ ಬೇರೆ ಬೇರೆ ಮಗ್ಗುಲಗಳನ್ನು ಆರಿಸಿಕೊಂಡು ಕಾರ್ಯಪ್ರವೃತ್ತರಾಗಲು ಬೇಕಾದ ಸಾಮಗ್ರಿ ಇದರಲ್ಲಿ ದೊರೆಯುತ್ತದೆನ್ನಿಸುತ್ತದೆ. ಇಲ್ಲಿನವರೆಗೆ ಈ ಅಭೂತಪೂರ್ವ ಗ್ರಂಥದ ಬಗ್ಗೆ ಅನಾದರ ತೋರಿದ್ದ ಕನ್ನಡ ಸಾರಸ್ವತ ಲೋಕ ಇದರೆಡೆಗೆ ಇನ್ನಾದರೂ ಆಸಕ್ತಿಯನ್ನು ಬೀರಿ ಕೃತಿಯ ಸತ್ವ ಪ್ರಕಟಗೊಳ್ಳಲು ಸಹಕರಿಸುತ್ತದೆಂಬುದು ನಮ್ಮ ನಿರೀಕ್ಷೆ.

## ೪.'ಸಮಗ್ರ ದಾಸಸಾಹಿತ್ಯ ಸಂಪುಟ'ಗಳ ಐತಿಹಾಸಿಕ ಪ್ರಕಟಣೆ

**-ನಾ. ಗೀತಾಚಾರ್ಯ**

ಕರ್ನಾಟಕ ಸರ್ಕಾರ ಇತ್ತೀಚೆಗೆ ಒಂದು ಅಪರೂಪದ ಮಹತ್ವದ ಪುಸ್ತಕ ಸಂಪುಟವನ್ನು ಪ್ರಕಟಿಸಿ ಬಿಡುಗಡೆ ಮಾಡಿದೆ. ಈ ಸಂಪುಟದಲ್ಲಿ ಒಟ್ಟು 50 ಪುಸ್ತಕಗಳಿವೆ. ಪ್ರತಿ ಪುಸ್ತಕವೂ ಕನಿಷ್ಠ 500 ಪುಟ ಗರಿಷ್ಠ 800 ಪುಟವಿದೆ. ಅದೇ "ಸಮಗ್ರ ದಾಸಸಾಹಿತ್ಯ ಸಂಪುಟ". ಇದು ನಿಜಕ್ಕೂ ಒಂದು ಐತಿಹಾಸಿಕ ದಾಖಲೆಯೇ ಸರಿ. ಸುಂದರವಾದ ಮುಖಪುಟದಿಂದ ಸುಂದರವಾದ ಎರಡು ರಟ್ಟಿನ ಪೆಟ್ಟಿಗೆಯಲ್ಲಿ ಅಡಕಗೊಂಡಿರುವ ಸಂಪುಟಗಳನ್ನು ವಾಹನದಲ್ಲೇ ತರಬೇಕು. ಅಷ್ಟೊಂದು ಭಾರವಾದ ಈ ಐವತ್ತು ಪುಸ್ತಕಗಳ ಬೆಲೆ ಮಾತ್ರ ಹಗುರ, ಕೇವಲ 2,400/- ರೂಪಾಯಿಗಳು ಮಾತ್ರ. ಪ್ರತಿ ಪುಸ್ತಕದ ಬೆಲೆ ಬರೀ 60/- ರೂಪಾಯಿ ಮಾತ್ರ. ಕರ್ನಾಟಕ ಸರ್ಕಾರದ ಕನ್ನಡ ಸಂಸ್ಕೃತಿ ಇಲಾಖೆಯವತಿಯಿಂದ ಪ್ರಕಟವಾಗಿರುವ ಎಂ.ಎಸ್. ಐ.ಎಲ್. ಮುದ್ರಿಸಿರುವ ಹೆಮ್ಮೆಯ ಪ್ರಕಟನೆಯಾದ ಈ ಪುಸ್ತಕ ಸಂಪುಟವನ್ನು ಸಾಹಿತ್ಯಾಸಕತ್ತರು, ಸಂಗೀತಾಭಿಮಾನಿಗಳು, ಸಂಗೀತಗಾರರು, ಹರಿದಾಸ ಸಾಹಿತ್ಯ ಪ್ರಿಯರು ಕೊಂಡಿಟ್ಟುಕೊಳ್ಳಲೇಬೇಕಾದ ವಿಶೇಷ ಪುಸ್ತಕ ಸೆಟ್ ಇದು.

**ಸರ್ಕಾರದ ಸಾಧನೆ :** ಕಳೆದ ನಾಲ್ಕೈದು ವರ್ಷಗಳಿಂದ ವಿದ್ಯಾಪೀಠದಲ್ಲಿ ಆರಂಭವಾದ ಈ ಯೋಜನೆ ಸರ್ಕಾರದ ಮಡಿಲಿಗೆ ಬಿದ್ದು 3-4 ವರ್ಷ ಸತತವಾಗಿ ಸಿದ್ಧಗೊಂಡು ಒಂದೆರಡು ವರ್ಷ ಕತ್ತಲೆಕೋಣೆಯಲ್ಲಿದ್ದು ಇದೀಗ ಎಂ.ಎಸ್.ಎಲ್.ನವರ ಆರ್ಥಿಕ ಸಹಕಾರದಿಂದ ಬೆಳಕು ಕಂಡಿರುವ ಈ ಪುಸ್ತಕ ಯೋಜನೆಗೆ ದುಡಿದವರು ಅನೇಕರು. ಪ್ರತಿಯೊಂದು ಸಂಪುಟವನ್ನು ಒಬ್ಬೊಬ್ಬ ಸಂಪಾದಕರು ಶ್ರಮವಹಿಸಿ ಹಾಡುಗಳನ್ನು ಸಂಗ್ರಹಿಸಿ ಮಾಹಿತಿ ಕಲೆ ಹಾಕಿ ಸಂಪಾದಿಸಿಕೊಟ್ಟಿದ್ದಾರೆ. ಒಟ್ಟಾರೆಯಾಗಿ ಡಾ।। ಶ್ರೀನಿವಾಸ ಹಾವನೂರರು, ಡಾ।। ಶ್ರೀಮತಿ ಟಿ. ಎನ್. ನಾಗರತ್ನ (ಮೈಸೂರು) ಪ್ರೊ।। ವಸಂತ ಕುಷ್ಟಗಿ (ಗುಲಬರ್ಗ) ಇವರುಗಳು ವ್ಯವಸ್ಥಾಪಕ ಸಂಪಾದಕರಾಗಿದ್ದು ಎಲ್ಲ ಸಂಪಾದಕರೊಂದಿಗೆ ಸಂಪರ್ಕವಿಟ್ಟುಕೊಂಡು, ಚರ್ಚಿಸಿ ಸಂಪುಟಗಳು ಅಂತಿಮ ರೂಪ ಪಡೆಯಲು ಸಹಕರಿಸಿದ್ದಾರೆ.

## ಸಹಕರಿಸಿದವರಿಗೆ ನಮನ

ಮುದ್ರಣ ಹಂತದಲ್ಲಿ ಎಲ್ಲ ಸಂಪುಟಗಳೂ ಏಕ ರೀತಿಯಲ್ಲಿ ಹೊರಬರುವಂತೆ ಮಾಡುವಲ್ಲಿ ಎಂ.ಎಸ್.ಐ.ಎಲ್.ನ ವಿಶೇಷಾಧಿಕಾರಿಗಳಾಗಿದ್ದ ಶ್ರೀ ಎಂ. ರವಿಶಂಕರ್ ಅವರ ನೇತೃತ್ವದಲ್ಲಿ ಪ್ರೊ॥ ಜಿ. ಅಶ್ವತ್ಥನಾರಾಯಣ, ಡಾ॥ ಅನಂತಪದ್ಮನಾಭರಾವ್, ಪ್ರೊ॥ ನಾ. ಗೀತಾಚಾರ್ಯ ಅವರು ಕಂಡು ಪರಿಶೀಲಿಸಿ ಪುನರಾವರ್ತನೆಯಾಗದಂತೆ ಎಲ್ಲ ಸಂಪುಟಗಳೂ ಒಂದೇ ಸ್ವರೂಪದಲ್ಲಿರುವಂತೆ ನೋಡಿಕೊಳ್ಳುವ ಸಂಚಾಲನಾ ಸಮಿತಿಯ ಸದಸ್ಯರಾಗಿ ನೆರವಾಗಿದ್ದಾರೆ. ಸಂಪಾದನಾ ಮಂಡಲಿಯ ಸದಸ್ಯರು ಸರ್ಕಾರದ ಅಧಿಕಾರಿಗಳು, ಕನ್ನಡ ಸಂಸ್ಕೃತಿ ಇಲಾಖೆಯ ನಿರ್ದೇಶಕರು, ಕಾರ್ಯದರ್ಶಿಗಳು, ಮಂತ್ರಿಗಳು ಈ ಸಂಪುಟಗಳು ಶೀಘ್ರ ಹೊರಬರಲು ಸಾಕಷ್ಟು ಶ್ರಮಿಸಿದ್ದಾರೆ. ಮುಖ್ಯಮಂತ್ರಿ ಎಸ್. ಎಂ. ಕೃಷ್ಣ ಅವರ ಅಧಿಕಾರದ ಕೊನೆಯ ದಿನಗಳಲ್ಲಿ ಈ ವಿಶೇಷ ಸಂಪುಟಗಳು ಬಿಡುಗಡೆಯಾದರೂ ಅಧಿಕೃತವಾಗಿ ಮಾರಾಟಕ್ಕೆ ಬಿಡುಗಡೆಯಾದದ್ದು ಕಳೆದ ತಿಂಗಳು. ಕೇವಲ ಒಂದು ಸಾವಿರ ಪ್ರತಿಗಳನ್ನು ಮಾತ್ರ ಮುದ್ರಿಸಿರುವುದರಿಂದ ಬಹಳಬೇಗ ಮುಗಿದುಹೋಗುವ ಸಾಧ್ಯತೆ ಇರುವುದರಿಂದ ಆಸಕ್ತರು ಆದಷ್ಟು ಶೀಘ್ರವಾಗಿ ಕೊಳ್ಳವುದು ಉತ್ತಮ.

**ಇಪ್ಪತ್ತೈದು ಸಾವಿರ ಕೀರ್ತನೆಗಳ ಬಂಡಾರ :** ಈ ಐವತ್ತು ಸಂಪುಟಗಳ ವೈಶಿಷ್ಟ್ಯವೆಂದರೆ ಕ್ರಿ.ಶ. 1400 ರಿಂದ 1900ರ ವರೆಗಿನ ಎಲ್ಲ ಹರಿದಾಸರ ಸಮಗ್ರ ಕೀರ್ತನೆಗಳನ್ನು ಒಂದೆಡೆ ತಂದಿರುವುದು. 50 ಸಂಪುಟಗಳಲ್ಲಿ ಪ್ರತಿಸಂಪುಟದಲ್ಲಿ ಕನಿಷ್ಠ 500 ಕೀರ್ತನೆಗಳಿದ್ದು ಸುಮಾರು 25 ಸಾವಿರ ಕೀರ್ತನೆಗಳು ಒಟ್ಟಾಗಿ ಸಂಗ್ರಹವಾಗಿದೆ. ಇದನ್ನೇ ಐತಿಹಾಸಿಕ ಸಂಗ್ರಹವೆಂದದ್ದು. ಈವರೆಗೆ ಕೇವಲ 5-6 ಸಾವಿರ ಕೀರ್ತನೆಗಳು ಅದರಲ್ಲೂ ಪ್ರಮುಖವಾದ ಪುರಂದರ-ಕನಕ-ವಿಜಯದಾಸ- ಗೋಪಾಲದಾಸರಾದ ಕೆಲವೇ ಕೀರ್ತನಕಾರರ ಹಾಡುಗಳಷ್ಟೇ ಪ್ರಚಲಿತವಾಗಿದ್ದವು. ಈ ಸಂಪುಟದಿಂದ 350ಕ್ಕೂ ಅಧಿಕ ಕೀರ್ತನಕಾರರ ಕೀರ್ತನೆಗಳು ಹೊರಬಂದಿವೆ. ಇವುಗಳಲ್ಲಿ ಈವರೆಗೆ ಸಾಹಿತ್ಯ ಲೋಕಕ್ಕೆ ಪರಿಚಿತವಾಗಿರದಿದ್ದವರೇ ಅಧಿಕ ಮಂದಿ....ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ 15ನೇ ಶತಮಾನದಿಂದಲೂ ಬೆಳೆದುಬಂದಿರುವ ಪ್ರಸಿದ್ಧ ಹರಿದಾಸ ಸಾಹಿತ್ಯದ ಆಳ-ಅಗಲ-ಹರಹು ಎಷ್ಟೆಂಬುದು ಇದೀಗ ಈ ಸಂಪುಟಗಳ ಪ್ರಕಟನೆಯಿಂದ ವ್ಯಕ್ತವಾದಂತಾಗಿದೆ. ಇದರಿಂದ ಕನ್ನಡ ಹರಿದಾಸ ಸಾಹಿತ್ಯದ ಅಧ್ಯಯನವೇ ಪುನರಧ್ಯಯನಕ್ಕೆ ಪಕ್ಕಾಗಬೇಕಾಗಿದೆ.

**ಪುಸ್ತಕೋದ್ಯಮದ ದಾಖಲೆ :** ಇಷ್ಟೊಂದು ಸಂಖ್ಯೆಯ ಹರಿದಾಸರ ಹಾಡುಗಳನ್ನು ಒಟ್ಟಿಗೇ 50 ಸಂಪುಟಗಳಲ್ಲಿ ಒಂದೇ ಸೆಟ್ಟಿನಲ್ಲಿ ಮುದ್ರಿಸಿ ಪುಸ್ತಕ ರೂಪದಲ್ಲಿ ಹೊರತಂದಿರುವುದೇ ಒಂದು ಐತಿಹಾಸಿಕ ದಾಖಲೆ. ಇಂದಿನ ದಿನಗಳಲ್ಲಿ ಕೇವಲ ಒಂದು ಪುಸ್ತಕ ಪ್ರಕಟಿಸಲು ಹೆಣಗಾಡಬೇಕಾಗಿರುವಾಗ 3-4 ಪುಸ್ತಕಗಳ ಸೆಟ್ ಅನ್ನು ಪ್ರಕಟಿಸಲು ಕಷ್ಟವಾಗಿರುವಾಗ 50 ಪುಸ್ತಕಗಳ ಸೆಟ್ ಅನ್ನು (ಅಂದಾಜು 30 ಸಾವಿರ ಪುಟಗಳು) ಇಡಿಗಂಟಾಗಿ ಪ್ರಕಟಿಸುವುದೇನು ಸಾಮಾನ್ಯವೇ? ಅಂದಾಜು ಒಂದುಕೋಟಿ ರೂಪಾಯಿ ಯೋಜನೆ, ಸರ್ಕಾರ ಗಟ್ಟಿಮನಸ್ಸು ಮಾಡಿ ಎಂ.ಎಸ್.ಐ.ಎಲ್.ನ ಸಹಕಾರ ಪಡೆದು ಈ

ಪುಸ್ತಕವನ್ನು ಪ್ರಕಟಿಸಿರುವುದಕ್ಕಾಗಿ, ಇದಕ್ಕಾಗಿ ಶ್ರಮಿಸಿದ ಸಂಪಾದ ವರ್ಗದವರಿಗಾಗಿ ಇಡೀ ಕನ್ನಡ ಜನತೆ ಕೃತಜ್ಞರಾಗಿರಬೇಕು.

## ದ್ವೈತ-ಅದ್ವೈತ-ವಿಶಿಷ್ಟಾದ್ವೈತಗಳ ತ್ರಿವೇಣಿ ಸಂಗಮ

ಈ ಸಂಪುಟಗಳಲ್ಲಿನ ಇನ್ನೂ ಒಂದು ವೈಶಿಷ್ಟ್ಯವೆಂದರೆ ಹರಿದಾಸ ಸಾಹಿತ್ಯ 'ತ್ರಿವೇಣಿ ಸಂಗಮ' ವಾಗಿರುವುದನ್ನು ದಾಖಲಿಸಿರುವುದು. ಹರಿದಾಸ ಸಾಹಿತ್ಯ ಮುಖ್ಯವಾಗಿ ವೈದಿಕ ಸಾಹಿತ್ಯ. ಈ ವರೆಗಿನ ತಿಳುವಳಿಕೆಯೆಂದರೆ ಹರಿದಾಸ ಸಾಹಿತ್ಯವೆಂದರೆ ಮಾಧ್ವಸಾಹಿತ್ಯ ಎನ್ನುವುದಾಗಿತ್ತು. ಆದರೆ ಈ ಸಂಪುಟಗಳಲ್ಲಿ ಅದ್ವೈತ ಹರಿದಾಸರ ಹಾಡುಗಳ 4 ಸಂಪುಟಗಳಿವೆ. ವಿಶಿಷ್ಟಾದ್ವೈತ ಹರಿದಾಸರ ಹಾಡುಗಳು 4 ಸಂಪುಟಗಳಿವೆ. ಹೀಗಾಗಿ ಹರಿದಾಸ ಸಾಹಿತ್ಯ ಕೇವಲ ಮಾಧ್ವವಾಹಿನಿಯಾಗಿದೆ. ಗಂಗಾ-ಯಮುನಾ-ಸರಸ್ವತಿಯರಂತೆ ದ್ವೈತ-ಅದ್ವೈತ-ವಿಶಿಷ್ಟಾದ್ವೈತಗಳ ಸಂಗಮವಾಗಿ ಶೋಭಿಸಿದೆ ಈ ಮೂರು ತತ್ವಗಳಲ್ಲಿ ಜೀವನದರ್ಶನಗಳನ್ನು ಕಂಡಿರುವ ಹರಿದಾಸರು ಲೋಕೋಪಕಾರಕ್ಕಾಗಿ ತಮ್ಮ ಬದುಕನ್ನೇ ಸವೆಸಿದ ಸಾಧಕರಾಗಿ ಇಷ್ಟೊಂದು ಬೃಹತ್ತಾದ ಸಮಾಜಮುಖೀ ಸಾಹಿತ್ಯವನ್ನು ಕನ್ನಡನಾಡಿಗೆ ಕೊಟ್ಟಿದ್ದಾರೆ.

ಈ ಸಂಪುಟಗಳ ಇನ್ನೊಂದು ವಿಶೇಷ ಹರಿದಾಸ ಸಾಹಿತ್ಯದಲ್ಲಿ ವೈದಿಕೇತರ ಪಂಥದ ಸೇರ್ಪಡೆ. ಈವರೆಗೆ ಕನಕದಾಸರೊಬ್ಬರೇ ಈ ವರ್ಗದಲ್ಲಿ ಗುರುತಿಸುವವರಾಗಿದ್ದರು. ಇದೀಗ 19ನೇ ಶತಮಾನದಲ್ಲಿ ತುಳಸಿರಾಮದಾಸರಿಂದ ನಡೆದಿರುವ ಇನ್ನೊಂದು ಹರಿದಾಸ ಚಳುವಳಿಯ ಮೂಲಕ 30ಕ್ಕೂ ಹೆಚ್ಚು ಜನ ವೈದಿಕೇತರ ಹರಿದಾಸರು ಕಂಡುಬಂದಿದ್ದಾರೆಂದುಈ ಮಾಲೆಯ 35ನೇ ಸಂಪುಟ ದಾಖಲಿಸಿದೆ. ಅದರಲ್ಲಿ ಬಣಜಿಗರಾದ ಚನ್ನಪಟ್ಟಣದ ಅಹೋಬಲದಾಸರ ಹಾಡುಗಳು ಮತ್ತು 31ನೇ ಸಂಪುಟದಲ್ಲಿನ ಗಾಣಿಗರಾದ ಮುಳಬಾಗಿಲಿನ ಮಳಿಗೆರಂಗಸ್ವಾಮಿ ದಾಸರಹಾಡುಗಳು ಸೊಗಸಾಗಿವೆ. ಇದರಿಂದ ಹರಿದಾಸ ಸಾಹಿತ್ಯವೂ ವಚನಸಾಹಿತ್ಯದಂತೆ ಸಮಾಜಮುಖಿ ಸಾಹಿತ್ಯವಾಗಿದೆ ಎಂಬುದು ಸಾಬೀತಾಗಿದೆ.

* * * *

# ಪ್ರತಿಷ್ಠಾನ ವಾರ್ತೆ

## ೧. ಕಾರ್ಯಕ್ರಮಗಳು

### (ಅ) ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟಾದ್ವೈತ ವಿಚಾರಣ ಸಂಕಿರಣ ಹಾಗೂ ಪುಸ್ತಕ ಬಿಡುಗಡೆ (15-5-2005)-ಒಂದು ವರದಿ

ಕ್ರಿಸ್ತಶಕ 11ನೇ ಶತಮಾನದಿಂದಲೂ ಕರ್ನಾಟಕದಲ್ಲಿ ವಿಶಿಷ್ಟಾದ್ವೈತ ಧರ್ಮ ಬಳಕೆಯಲ್ಲಿದ್ದರೂ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟಾದ್ವೈತ ಕಾಣಿಸಿಕೊಳ್ಳಲಿಲ್ಲ ಎಂಬ ನಿಲುವಿನಲ್ಲೇ ಇದ್ದ ಸಾಹಿತ್ಯ ಲೋಕಕ್ಕೆ 90ರ ದಶಕದಿಂದ ವಿಶಿಷ್ಟಾದ್ವೈತದ ಒಂದೊಂದೇ ಸಾಹಿತ್ಯ ಕೃತಿಗಳನ್ನು ಪರಿಚಯಿಸಿದ ಕೀರ್ತಿ ನಾರಾಯಣಶರ್ಮಾ ಸಂಸ್ಕೃತಿ ಕೇಂದ್ರ ದೊಡ್ಡ ಹೆಜ್ಜಾಜಿ ಇವರಿಗೆ ಸಲ್ಲುತ್ತದೆ. ಈ ನಿಟ್ಟಿನಲ್ಲಿ ನಡೆಸಿದ ಸಂಶೋಧನೆಗಳ ಫಲವಾಗಿ ಸು. 15 ಜನ ಹರಿದಾಸರ 2000ಕ್ಕೂ ಅಧಿಕ ಕೀರ್ತನೆಗಳು ಲಭ್ಯವಾಗಿದ್ದು, ಇವು ಕನ್ನಡ ಸಂಸ್ಕೃತಿ ಇಲಾಖೆಯ ದಾಸ ಸಾಹಿತ್ಯ ಸಂಪುಟದಲ್ಲಿ ಪ್ರಕಟವಾಗಿವೆ (ಸಂಪುಟ 35 ಭಾಗ 1-2, ಸಂ. 184, ಸಂ. 31).

ಈ ವಿಶಿಷ್ಟಾದ್ವೈತ ಸಾಹಿತ್ಯ ಪ್ರಕಟಣೆಯ ಅಂಗವಾಗಿ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ನಾರಾಯಣಶರ್ಮ ಸಂಸ್ಕೃತ ಕೇಂದ್ರ ಮತ್ತು ತುಳಸಿರಾಮದಾಸ ಶತಮಾನೋತ್ಸವ ಸಮಿತಿ ಬೆಂಗಳೂರು, ಇವರ ಸಂಯುಕ್ತಾಶ್ರಯದಲ್ಲಿ ವಿಚಾರ ಸಂಕಿರಣ ಹಾಗೂ "ಬೇಲೂರು ವೈಕುಂಠದಾಸರ ಕೀರ್ತನೆಗಳು" ಪುಸ್ತಕ ಬಿಡುಗಡೆ ಸಮಾರಂಭ ನಡೆದವು.

ಕಾರ್ಯಕ್ರಮವು ಶ್ರೀ ಎಂ. ಎ. ಜಯರಾಮರಾವ್‌ರವರು ಬೇಲೂರು ವೈಕುಂಠದಾಸರ ಪ್ರಾರ್ಥನಾ ಕೀರ್ತನೆಗಳನ್ನು ಹಾಡುವುದರ ಮೂಲಕ ಪ್ರಾರಂಭವಾಯಿತು. ಸಮಾರಂಭದ ಸ್ವಾಗತವನ್ನು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ, ವಿದ್ವಾಂಸ ಡಾ|| ಟಿ. ವಿ. ವೆಂಕಟಚಲಶಾಸ್ತ್ರಿಯವರು ಕೋರಿದರು. ಉದ್ಘಾಟನಾ ಕಾರ್ಯಕ್ರಮದ ಪ್ರಸ್ತಾವನೆಯನ್ನು ಪ್ರತಿಷ್ಠಾನದ ಗೌರವ ಕಾರ್ಯದರ್ಶಿಗಳಾದ ನಾ. ಗೀತಾಚಾರ್ಯ ಅವರು ಮಾಡಿದರು. ಕಾರ್ಯಕ್ರಮದ ನಿರೂಪಣೆ ಮೈಸೂರಿನ ಹಿರಿಯವಿದ್ವಾಂಕ ಡಾ|| ನೀ ಕೃ.ರಾಮಶೇಷನ್ ರವರು ಮಾಡಿದರು.

ವಿಜಾರ ಸಂಕಿರಣ ಉದ್ಘಟನೆಯನ್ನು ಅಷ್ಟಾಂಗಯೋಗ ವಿಜ್ಞಾನ ಮಂದಿರ ಬೆಂಗಳೂರಿನ ಪರಮಪೂಜ್ಯ ಶ್ರೀ ಶ್ರೀ ರಂಗಪ್ರಿಯ ಮಹಾದೇಶಿಕ ಸ್ವಾಮಿಗಳು ಜ್ಯೋತಿ ಬೆಳಗಿಸುವುದರ ಮೂಲಕ ನಡೆಸಿದರು.

"ಬೇಲೂರು ವೈಕುಂಠದಾಸರ ಕೀರ್ತನೆಗಳು" ಪುಸ್ತಕವನ್ನು ಬಿಡುಗಡೆ ಮಾಡಿ ಮಾತನಾಡಿದ ಹಂಪಿ ಕನ್ನಡ ವಿಶ್ವವಿದ್ಯಾಲಯದ ಪ್ರಾಧ್ಯಾಪಕರೂ, ಕನ್ನಡ ಪುಸ್ತಕ ಪ್ರಾಧಿಕಾರದ ನಿಕಟಪೂರ್ವ ಅಧ್ಯಕ್ಷರೂ ಆದ ಪ್ರೊ|| ಮಲ್ಲೇಪುರಂ ಜಿ. ವೆಂಕಟೇಶ ಅವರು ಕನ್ನಡ ಸಾಹಿತ್ಯದ ವಿದ್ಯುತ್ ಕ್ಷೇತ್ರದಲ್ಲಿ ಯುವ ಸಂಶೋಧಕರ ಕೊರತೆ ಇದೆ ಎಂದು ವಿಷಾದ ವ್ಯಕ್ತಪಡಿಸಿ, ಪ್ರೊ|| ಜಿ. ವೆಂಕಟಸುಬ್ಬಯ್ಯ, ಡಾ|| ಎಂ. ಚಿದಾನಂದ ಮೂರ್ತಿ, ಡಾ|| ಎಂ. ಎಂ. ಕಲುಬುರ್ಗಿ, ಡಾ|| ಟಿ. ವಿ. ವೆಂಕಟಾಚಲಾಶಾಸ್ತ್ರಿ ಮುಂತಾದ ಹಿರಿಯ ತಲೆಮಾರಿನ ಶ್ರೇಷ್ಠ ವಿದ್ವಾಂಸರಿಂದ

ಕನ್ನಡ ಸಾಹಿತ್ಯ ಮತ್ತು ಸಂಶೋಧನಾ ಕ್ಷೇತ್ರ. ಸಮೃದ್ಧವಾಗಿದೆ. ಆದರೂ ಇವರ ನಂತರ ಈ ಸ್ಥಾನಗಳನ್ನು ತುಂಬುವವರು ಯಾರು ಎಂದು ಪ್ರಶ್ನೆ ಹಾಕಿಕೊಂಡರೆ ಉತ್ತರ ಶೂನ್ಯವಾಗುತ್ತದೆ, ಈ ಮಟ್ಟದ ಗಣ್ಯ ವಿದ್ವಾಂಸರು ನಮ್ಮ ಇಂದಿನ ತಲೆಮಾರಿನಲ್ಲಿ ಗಣನೀಯವಾಗಿ ಕಂಡುಬರುತ್ತಿಲ್ಲ. ಗಂಭೀರವಾದ ಸಾಹಿತ್ಯಚಿಂತನೆ, ಆಳವಾದ ಅಧ್ಯಯನ, ಶ್ರದ್ಧೆ, ನಿಷ್ಠೆ ಮತ್ತು ಉತ್ಸಾಹಗಳಿಂದ ಕೆಲಸ ಮಾಡುತ್ತಿರುವ ಕೆಲವೇ ವಿದ್ವಾಂಸರ ಪಟ್ಟಿಗೆ ಇದೀಗ ಪ್ರೊ॥ ನಾ. ಗೀತಾಚಾರ್ಯರು ಸೇರ್ಪಡೆಯಾಗುತ್ತಿದ್ದಾರೆ ಎಂದು ತಿಳಿಸಿ. ಪ್ರೊ॥ ನಾ. ಗೀತಾಚಾರ್ಯರು ಸಂಪಾದಿಸಿರುವ ಈ ಪುಸ್ತಕದಿಂದ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟಾದ್ವೈತ ಸಾಹಿತ್ಯದ ಅಸ್ತಿತ್ವ ಕ್ರಿ.ಶ. 16ನೇ ಶತಮಾನಕ್ಕೆ ಕೊಂಡೊಯ್ಯುತ್ತದೆ. ಪುರಂದರ, ಕನಕದಾಸರ ಹಿರಿಯ ಸಮಕಾಲೀನರಾಗಿದ್ದ ವೈಕುಂಠದಾಸರು ಸೊಗಸಾಗಿ ಪ್ರಪತ್ತಿ ಧರ್ಮವನ್ನು ಪ್ರತಿಪಾದಿಸಿದ್ದಾರೆ. ಇದರೊಂದಿಗೆ ಶ್ರೀ ಗೀತಾಚಾರ್ಯರು ಪ್ರಕಟಿಸಿರುವ ಶ್ರೀ ವೈಷ್ಣವ ಸಾಹಿತ್ಯದ ಮೂಲಕ ಕನ್ನಡ ಸಾಹಿತ್ಯ ಹೊಸದೊಂದು ಆಯಾಮವನ್ನು ಪಡೆದಂತಾಗಿದೆ ಎಂದು ಹೇಳಿದರು.

ಈ ಉದ್ಘಾಟನಾ ಸಮಾರಂಭದ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಕಲ್ಬುರ್ಗಿಯ ಹಿರಿಯ ವಿದ್ವಾಂಕ ಪ್ರೊ॥ ವಸಂತ ಕುಷ್ಟಗಿಯವರು ಮಾತನಾಡಿ ಪ್ರೊ॥ ನಾ. ಗೀತಾಚಾರ್ಯರು ತಮ್ಮ ತಂದೆಯವರೂ ಶ್ರೀ ವೈಷ್ಣವ ಹರಿದಾಸರೂ ಆದ ನಾರಾಯಣ ಶರ್ಮರ ಕೀರ್ತನೆಗಳನ್ನು ಪ್ರಕಟಿಸುವ ಕಾರ್ಯಕ್ಕೆ ಕೈಹಾಕಿ ಕನ್ನಡ ಸಾಹಿತ್ಯ ಭಂಡಾರಕ್ಕೆ ಶ್ರೀ ವೈಷ್ಣವ ಸಾಹಿತ್ಯ ನಿಧಿಯನ್ನೆ ಹೆಕ್ಕಿ ಕೊಟ್ಟಿದ್ದಾರೆ. ನಾರಾಯಣಶರ್ಮ ಸಂಸ್ಕೃತಿ ಕೇಂದ್ರದ ಮೂಲಕ ಅವರು ಮಾಡಿರುವ ಸಾಹಿತ್ಯ ಸಾಧನೆ ಕನ್ನಡದಲ್ಲಿ ಚಿರಸ್ಥಾಯಿಯಾದುದು, ಕನ್ನಡ ಸಾಹಿತ್ಯ ಲೋಕಕ್ಕೆ ಹೊಸದೆಂದು ಮಾರ್ಗವನ್ನೆ ತೆರೆದುಕೊಟ್ಟಿರುವ ಈ ಪ್ರಥಮ ವಿಶಿಷ್ಟಾದ್ವೈತ ವಿಚಾರ ಸಂಕಿರಣ ಇದು ಎಂದು ಬಣ್ಣಿಸಿ ಇದು ದ್ವೈತ ಅದ್ವೈತ ಹಾಗೂ ವಿಶಿಷ್ಟಾದ್ವೈತಗಳ ತ್ರಿವೇಣಿ ಸಂಗಮ ಎಂದು ಹೇಳಿದರು.

ಈ ಉದ್ಘಾಟನಾ ಕಾರ್ಯಕ್ರಮದ ಅಧ್ಯಕ್ಷ ಭಾಷಣ ಮಾಡಿದ ಪ್ರಸಿದ್ಧ ವಿದ್ವಾಂಸರು ನಿಘಂಟು ತಜ್ಞರು ಆದ ಪ್ರೊ॥ ಜಿ. ವೆಂಕಟಸುಬ್ಬಯ್ಯನವರು, ಕನ್ನಡದಲ್ಲಿ ವಿಶಿಷ್ಟಾದ್ವೈತ ಸಾಹಿತ್ಯವಿದೆ ಇದನ್ನು ಶೋಧಿಸಿದ ಪ್ರೊ॥ ನಾ. ಗೀತಾಚಾರ್ಯರು ಅಭಿನಂದನಾರ್ಹರು ಕ್ರಿ.ಶ. 16ನೇ ಶತಮಾನದಿಂದಲೂ ಈ ಸಾಹಿತ್ಯ ಅವ್ಯಾಹತವಾಗಿ ಬೆಳೆದುಬಂದಿದ್ದರೂ ಕನ್ನಡ ಸಾಹಿತ್ಯ ಅತ್ತ ಈವರೆಗೆ ಗಮನ ಹರಿಸಿರಲಿಲ್ಲ ಪ್ರೊ॥ ನಾ. ಗೀತಾಚಾರ್ಯರು ಆ ಕ್ಷೇತ್ರದಲ್ಲಿ ಶ್ರದ್ಧೆ ನಿಷ್ಠೆ ಮತ್ತು ಉತ್ಸಾಹದಿಂದ ಸಂಶೋಧನೆ ಮಾಡಿ 15ಕ್ಕೂ ಹೆಚ್ಚು ಜನ ಶ್ರೀ ವೈಷ್ಣವ ಹರಿದಾಸರನ್ನು ಶೋಧಿಸಿ 2000ಕ್ಕೂ ಹೆಚ್ಚಿನ ಕೀರ್ತನೆಗಳನ್ನು ಅಗತ್ಯ ಟಿಪ್ಪಣಿಗಳೊಂದಿಗೆ ಪಾಂಡಿತ್ಯ ಪೂರ್ಣವಾಗಿ ಸಂಪಾದಿಸಿ ಪ್ರಕಟಿಸಿದ್ದಾರೆ. ಕರ್ನಾಟಕ ಸರ್ಕಾರದ ಸಮಗ್ರ ಹರಿದಾಸ ಸಾಹಿತ್ಯ ಸಂಪುಟಗಳ ಮಾಲೆಯಲ್ಲಿ ಎರಡು ಸಂಪುಟ ಹೊರಬಂದಿವೆ. ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟಾದ್ವೈತದ ವಿಚಾರ ಸಂಕಿರಣದ ಮೂಲಕ ಪ್ರೊ॥ ನಾ. ಗೀತಾಚಾರ್ಯ ಅವರು ಚರ್ಚೆಗೆ ನಾಂದಿ ಹಾಡಿದ್ದಾರೆ, ಈ ಸಾಹಿತ್ಯ ಈಗ ನಮ್ಮ ಮುಂದೆ ಇದೆ. ವಿದ್ವಾಂಸರು ಇದರ ವಿಶ್ಲೇಷಣೆ ಮಾಡಬೇಕಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯನ್ನು ಇದರ ಹಿನ್ನೆಲೆಯಲ್ಲಿ ಪುನರಧ್ಯಯನಕ್ಕೆ ಒಳಪಡಿಸಬೇಕಾಗಿದೆ. ಜೊತೆಗೆ ಇದರ ಅಚ್ಚುಕಟ್ಟಿನ ಅಧ್ಯಯನಕ್ಕೆ ಪೀಠಿಕೆ, ಟೀಕೆಗೆ ತಾತ್ಪರ್ಯ ಹಾಗೂ ಸರಳ ಅನುವಾದ, ಸಂಕಲನ ಕಾರ್ಯ ಜನಸಾಮಾನ್ಯರಿಗೆ ಈ ಶಿಷ್ಟ ಗ್ರಾಮ್ಯದಿಂದ ಕೂಡಿದ ಸಾಹಿತ್ಯ ತಲುಪುವಂತೆ ಮಾಡಬೇಕು ಎಂದು ಕರೆಇತ್ತರು.

ಕಾರ್ಯಕ್ರಮದಲ್ಲಿ ಆಶೀರ್ವಚನ ನೀಡಿದ ಶ್ರೀ. ಶ್ರೀ. ರಂಗಪ್ರಿಯ ಮಹಾದೇಶಿಕ ಸ್ವಾಮಿಗಳು ಭಗವಾನ್ ಶಂಕರರ ಅದ್ವೈತ, ಶ್ರೀ ರಾಮಾನುಜರ ವಿಶಿಷ್ಟಾದ್ವೈತ, ಶ್ರೀ ಮಧ್ವಾಚಾರ್ಯರ ದ್ವೈತ ಇವು ಮೂರು ಸಮನ್ವಯಗೊಂಡ ಸರಳ ದೃಷ್ಟಿಯೇ 'ಭಾಗವತ'. ಈ ಭಾಗವತ ದೃಷ್ಟಿಯೇ ಸಾಹಿತ್ಯ ದೃಷ್ಟಿ. ಇದರಲ್ಲಿ ಈವರಗೆ ಇದ್ದ ವಿಶಿಷ್ಟಾದ್ವೈತದ ಕೊರತೆಯನ್ನು ಶ್ರೀ ಗೀತಾಚಾರ್ಯರು ತುಂಬಿಕೊಟ್ಟು ಈ ಸಮನ್ವಯವನ್ನು ಪೂರ್ಣಮಾಡಿದ್ದಾರೆ. ಅವರು ಸಂಪಾದಿಸಿರುವ ಶ್ರೀ ವೈಷ್ಣವ ಸಾಹಿತ್ಯ ಗ್ರಂಥಗಳು ಮೌಲಿಕವಾದ ಪೀಠಿಕೆ ಅನುಬಂಧಗಳಿಂದ ಕೂಡಿ ವಿದ್ವತ್ಪೂರ್ಣವಾಗಿದೆ ಎಂದು ತಿಳಿಸಿ ಭಗವಂತ ಅವರಿಗೆ ಶ್ರೇಯಸ್ಸನ್ನುಂಟುಮಾಡಲಿ, ಈ ಚರ್ಚೆಯ ಮೂಲಕ ಸಾಹಿತ್ಯ ಸಮಾಜಮುಖಿಯಾದ ಮಾನವ ಧರ್ಮವನ್ನು ಎತ್ತಿಹಿಡಿಯುವಂತಾಗಲಿ ಎಂದು ಆಶೀರ್ವಚನ ನೀಡಿದರು.

**ಗೋಷ್ಠಿ-1** ರ ಅಂಗವಾಗಿ ಕರ್ನಾಟಕದಲ್ಲಿ ವಿಶಿಷ್ಟಾದ್ವೈತ ಶೀರ್ಷಿಕೆಯಡಿಯಲ್ಲಿ ವಿಶಿಷ್ಟಾದ್ವೈತ ಧರ್ಮ ಮತ್ತು ಸಂಸ್ಕೃತಿ ಕುರಿತು ಮಾತನಾಡಿದ ಗಾಂಧಿವಾದಿ ಶ್ರೀ ನೀಲತ್ತಹಳ್ಳಿ ಕಸ್ತೂರಿಯವರು ವಿಶಿಷ್ಟಾದ್ವೈತ ಸಾಹಿತ್ಯ ಕರ್ನಾಟಕದಲ್ಲಿ ಶ್ರೀ ರಾಮಾನುಜಾಚಾರ್ಯರ ಆಗಮನದ ಪೂರ್ವದಿಂದಲೇ ಲಭ್ಯವಾದುದಾಗಿದ್ದು, ರಾಮಾನುಜಾಚಾರ್ಯರಿಂದ ಇನ್ನೂ ಹೆಚ್ಚಿನ ಪ್ರಚಾರ ಪಡೆದು ದಾಸ ಸಾಹಿತ್ಯ ನಿರ್ಮಾಣಕ್ಕೆ ನಾಂದಿ ಹಾಡಿದುದಾಗಿದೆ. ಈ ಬಗೆಯ ವಿಶಿಷ್ಟಾದ್ವೈತ ಸಿದ್ಧಾಂತದ ಸಾಹಿತ್ಯದ ಸಂಪಾದನೆ ಮತ್ತು ವಿಚಾರ ಸಂಕಿರಣ ಸ್ತುತ್ಯಾರ್ಹವಾಗಿದೆ ಎಂದು ಪ್ರಶಂಸೆಮಾಡಿದರು.

ಈ ಗೋಷ್ಠಿಯ ಎರಡನೇ ಉಪನ್ಯಾಸ "ಸಾಹಿತ್ಯದಲ್ಲಿ ಧರ್ಮದ ಅಭಿವ್ಯಕ್ತಿಯ ಸಾಧ್ಯತೆಗಳು" ಅನ್ನು ಕುರಿತು ಮಾತನಾಡಿದ ಹಿರಿಯ ವಿದ್ವಾಂಸ ಡಾ॥ ಪಿ. ವಿ. ನಾರಾಯಣ ಅವರು ಸಮಕಾಲೀನ ಪ್ರಪಂಚದಲ್ಲಿನ ಧರ್ಮಾವಲಂಬಿಗಳಿಗೆ ತಮ್ಮ ಧರ್ಮದ ಕುರಿತು ಇರುವ ಅಲ್ಪ ಪ್ರಮಾಣದ ತಿಳುವಳಿಕೆ ಕುರಿತು ವಿಷಾದ ವ್ಯಕ್ತಪಡಿಸುತ್ತಾ, ಈ ವರೆಗೆ ಅಜ್ಞಾತವಾಗಿದ್ದ ಜನಸಾಮಾನ್ಯರ ವಿಶಿಷ್ಟಾದ್ವೈತ ಸಾಹಿತ್ಯ ಪ್ರೊ॥ ನಾ. ಗೀತಾಚಾರ್ಯರಿಂದ ಹೊರಬಂದಿರುವುದಕ್ಕೆ ಸಂತಸ ವ್ಯಕ್ತಪಡಿಸಿ ಕನ್ನಡ ಸಾಹಿತ್ಯದಲ್ಲಿನ ಧರ್ಮದ ಅಭಿವ್ಯಕ್ತಿಯ ಸಾಧ್ಯತೆಗಳನ್ನು ಎಳೆ ಎಳೆಯಾಗಿ ಬಿಡಿಸಿ ತೋರಿಸಿದರು.

ಈ ಗೋಷ್ಠಿಯ ಮೂರನೇ ಉಪನ್ಯಾಸವಾದ "ಕನ್ನಡದಲ್ಲಿ ವಿಶಿಷ್ಟಾದ್ವೈತ ಧಾರ್ಮಿಕ ಕೃತಿಗಳು" ಇದನ್ನು ಕುರಿತು ಮಾತನಾಡಿದ ಹಿರಿಯ ವಿದ್ವಾಂಸ ಶ್ರೀ ಎಂ. ಆರ್. ನರಸಿಂಹನ್ ಅವರು ಹಲವಾರು ಪ್ರಕಟಿತ ಅಪ್ರಕಟಿತ ವಿಶಿಷ್ಟಾದ್ವೈತ ಕನ್ನಡದ ಕೃತಿಗಳ ಪರಿಚಯ ಮಾಡಿಕೊಟ್ಟರು.

ಈ ಗೋಷ್ಠಿಯ ನಿರೂಪಣೆಯನ್ನು ಎಂ. ವಿ. ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಸಂಶೋಧನಾ ವಿದ್ಯಾರ್ಥಿ ಶ್ರೀ ಮುತ್ತುರಾಜು ಅವರು ಮಾಡಿದರು.

ಊಟದ ವಿರಾಮದ ನಂತರ ಮಧ್ಯಾಹ್ನ ನಡೆದ ವಿಶಿಷ್ಟಾದ್ವೈತ ಸಾಹಿತ್ಯ ಕುರಿತ ಗೋಷ್ಠಿ-2ರಲ್ಲಿ "ಕನ್ನಡದಲ್ಲಿ ವಿಶಿಷ್ಟಾದ್ವೈತ ಸಾಹಿತ್ಯ ಕೃತಿಗಳು" ಕುರಿತು ಹಿರಿಯ ವಿದ್ವಾಂಸ ಪ್ರೊ॥ ಜಿ. ಅಶ್ವತ್ಥನಾರಾಯಣ ಅವರು ಪ್ರಬಂಧ ಮಂಡನೆ ಮಾಡಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ

ಸಾಕಷ್ಟು ಸಾಹಿತ್ಯಚರಿತ್ರೆ ದಾಖಲೆಗಳ ಅಭಾವವಿದೆ. ಶ್ರೀ ನಾ. ಗೀತಾಚಾರ್ಯರು ಸಂಪಾದಿಸಿರುವ ಬೇಲೂರು ವೈಕುಂಠದಾಸರ ಕೀರ್ತನೆಗಳಂತಹ ನೂರಾರು ಅಜ್ಞಾತ ವಿಶಿಷ್ಟಾದ್ವೈತದ ಕೃತಿಗಳು ಹೊರಬರಬೇಕಾಗಿವೆ. ಕ್ರಿಸ್ತಶಕ 16ನೇ ಶತಮಾನದಿಂದಲೇ ಕಾಣಿಸಿಕೊಂಡಿರುವ ಹರಿದಾಸ ಸಾಹಿತ್ಯದಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತಗಳು ಬೇಲೂರು ವೈಕುಂಠದಾಸರಿಂದ ಹಿಡಿದು ನಾರಾಯಣ ಶರ್ಮರವರೆಗೆ 15ಕ್ಕೂ ಹೆಚ್ಚು ಜನ ಹರಿದಾಸರ ಎರಡು ಸಾವಿರಕ್ಕೂ ಅಧಿಕ ಕೀರ್ತನೆಗಳು ಲಭ್ಯವಾಗುವುದರ ಮೂಲಕ ತಿಳಿಯಪಟ್ಟಿವೆ. ಲಕ್ಷ್ಮೀಶ, ಕನಕದಾಸರೂ ಸಹ ಈ ವಿಶಿಷ್ಟಾದ್ವೈತ ತತ್ವದ ಅನುಯಾಯಿಗಳೇ ಆಗಿದ್ದಾರೆ. ಚಿಕ್ಕದೇವರಾಯನ ಕಾಲದಲ್ಲಿ ಸಮೃದ್ಧ ಶ್ರೀವೈಷ್ಣವ ಸಾಹಿತ್ಯವಿದೆ. ಅದನ್ನು ಸರಿಯಾದ ರೀತಿಯಲ್ಲಿ ಸಮೀಕ್ಷಿಸಬೇಕಾದ ಅಗತ್ಯವಿದೆ ಎಂದು ಹೇಳುತ್ತಾ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಚಿಕ್ಕುಪಾಧ್ಯಾಯ, ತಿರುಮಲಾರ್ಯ, ಪು.ತಿ.ನ. ನಾರಾಯಣಾಚಾರ್ಯ, ತುಪ್ಪುಳು ವೆಂಕಟಾಚಾರ್ಯ, ಎಲ್. ಗುಂಡಪ್ಪ, ಎನ್. ವಿ. ದೇಶಿಕಾಚಾರ್, ಮುಂತಾದ ಹಿರಿಯ ವಿದ್ವಾಂಸರುಗಳಿಂದ ರಚಿತವಾಗಿರುವ ಗದ್ಯ, ಕಾವ್ಯ, ಜೀವನ ಚರಿತ್ರೆ, ವಿಮರ್ಶೆ, ಅನುವಾದ, ಕಥೆ, ಕಾದಂಬರಿ ನಾಟಕಗಳಲ್ಲಿ ಹಂಚಿಹೋಗಿರುವ ವಿಶಿಷ್ಟಾದ್ವೈತದ ಸಮಗ್ರ ಸಾಹಿತ್ಯ ಅಧ್ಯಯನ ಆಗಬೇಕು ಎಂದು ಹೇಳಿದರು.

ಎರಡನೇ ಗೋಷ್ಠಿಯ ಎರಡನೇ ಉಪನ್ಯಾಸವನ್ನು "ಕನ್ನಡದಲ್ಲಿ ವಿಶಿಷ್ಟಾದ್ವೈತ ಹರಿದಾಸ ಸಾಹಿತ್ಯ" ಎಂಬ ಶಿರೋನಾಮೆಯೊಂದಿಗೆ ಪ್ರಬಂಧ ಮಂಡಿಸುವುದರ ಮೂಲಕ ಮೈಸೂರಿನ ಹಿರಿಯ ವಿದ್ವಾಂಸರಾದ ಡಾ॥ ನೀ. ಕೃ. ರಾಮಶೇಷನ್‌ರವರು ನಡೆಸಿಕೊಟ್ಟರು. ಶ್ರೀ ವೈಷ್ಣವ ಮತದಲ್ಲಿ ಅನುಸರಿಸಿರುವ ಸಂಸ್ಕೃತಿಯ ಸಿದ್ಧಾಂತಗಳು ಕೀರ್ತನೆಗಳ ಮೂಲಕ ಮೂಡಿಬಂದಿವೆ. ಸಂಶೋಧನೆಯ ಕೊರತೆಯಿಂದ ಕನ್ನಡ ಸಾಹಿತ್ಯ ಪ್ರಪಂಚಕ್ಕೆ ದುರ್ಬಲವಾಗಿದ್ದ ವಿಶಿಷ್ಟಾದ್ವೈತ ಹರಿದಾಸ ಸಾಹಿತ್ಯ ಈಗ ನಾರಾಯಣ ಶರ್ಮ ಸಾಂಸ್ಕೃತಿಕ ಕೇಂದ್ರದ ಮೂಲಕ ಹೊರಬಂದಿರುವುದನ್ನು ಶ್ಲಾಘಿಸಿ, ಕ್ರಿ.ಶ. 16ನೇ ಶತಮಾನದಿಂದ ಬೇಲೂರು ವೈಕುಂಠದಾಸರು ರಚಿಸಿರುವ ಈ ವಿಶಿಷ್ಟದ್ವೈತ ಕೀರ್ತನೆಗಳ ಸಂಶೋಧನೆಗಳು ಇನ್ನೂ ಹೆಚ್ಚಿನ ರೀತಿಯಿಂದ ಹೊರಬೀಳಲಿ ಎಂದು ಆಶಿಸಿದರು.

ಈ ಗೋಷ್ಠಿಯ ಮೂರನೇ ಉಪನ್ಯಾಸ "ವಿಶಿಷ್ಟಾದ್ವೈತದಲ್ಲಿ ಹರಿದಾಸ ಚಳುವಳಿ ಮತ್ತು ದೇಸೀ ಸಂಸ್ಕೃತಿ" ಎಂಬ ವಿಷಯ ಕುರಿತು ಶೇಷಾದ್ರಿಪುರಂ ಕಾಲೇಜು ಕನ್ನಡ ಪ್ರಾಧ್ಯಾಪಕ ಸಂಶೋಧಕ ಮತ್ತು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಕಾರ್ಯದರ್ಶಿಯೂ ಆದ ಪ್ರೊ॥ ನಾ. ಗೀತಾಚಾರ್ಯ ಅವರು ನಡೆಸಿಕೊಡುತ್ತಾ ಚಳುವಳಿ ಮತ್ತು ದೇಸೀ ಎಂಬ ಶಬ್ದಗಳ ಕುರಿತು ಚರ್ಚೆ ನಡೆಸಿದರು. ಕ್ರಿ.ಶ. 19ನೇ ಶತಮಾನದಲ್ಲಿಯೆ ತುಳಸಿರಾಮದಾಸರೆಂಬ ಹರಿದಾಸ ಸಂತರು ಕಂಡುಬಂದಿದ್ದು ಇವರು ಪವಾಡಪುರುಷರಂತೆ ಚಿತ್ರಿತರಾಗಿದ್ದಾರೆ, ಕೋಲಾರದಿಂದ ಮುಳಬಾಗಿಲವರೆಗೆ ಸಂಚರಿಸಿ ಬೆಂಗಳೂರಿನಲ್ಲಿ ಮಠ ಮಾಡಿಕೊಂಡು ಇನ್ನೊಂದು ಹರಿದಾಸ ಚಳುವಳಿಯನ್ನೆ ನಡೆಸಿದರು. ಈ ಚಳುವಳಿ ಸಾಮಾಜಿಕ ಉದ್ದೇಶದಿಂದ ಕೂಡಿದ್ದು ವಚನ ಸಾಹಿತ್ಯ ಚಳುವಳಿಯ ರೀತಿಯಂತೆ ಸಮಾಜದ ಎಲ್ಲಾ ವರ್ಗದವರನ್ನು ಒಳಗೊಂಡಿತ್ತು. ಗೌಡ, ಬಣಜಿಗ, ಗಾಣಿಗ ದಲಿತರೆಲ್ಲಾ ಹರಿದಾಸ ಕೀರ್ತನೆಗಳ ಸಾಹಿತ್ಯ

ರಚಿಸಿದ್ದಾರೆ ಎಂಬ ಹೊಸ ಅಂಶಗಳನ್ನು ನಿರೂಪಿಸಿದರು. ಯುದ್ಧ, ಕ್ಷಾಮ, ಬರಗಾಲ ಸಮಯದಲ್ಲಿ ಹಿಂದೂ ಧರ್ಮದ ದೇಶಿಯರು ಮತಾಂತರ ಹೊಂದುವುದನ್ನು ತಡೆಗಟ್ಟಿ ದೇಶಿಯ ಸಂಸ್ಕೃತಿ ಕಾಪಾಡಿ ಸಮಾಜೋದ್ಧಾರ ಕಾರ್ಯಗಳನ್ನು ಮಾಡಿದ ಶ್ರೀ ತುಳಸಿರಾಮದಾಸರ ಕಾರ್ಯಗಳನ್ನು ವಿವರಿಸಿ ಈ ಹಂತದ ಹರಿದಾಸ ಚಳುವಳಿಯ ದೇಸೀ ಸಂಸ್ಕೃತಿಯನ್ನು ಸ್ಪಷ್ಟವಾಗಿ ವಿವರಿಸಿದರು.

ಈ ಎರಡನೇ ಗೋಷ್ಠಿಯ ಅಧ್ಯಕ್ಷತೆಯನ್ನು ವಹಿಸಿದ್ದವರು ಮೈಸೂರು ವಿಶ್ವವಿದ್ಯಾಲಯದ ಹರಿದಾಸ ಸಾಹಿತ್ಯ ವಿಭಾಗದ ನಿವೃತ್ತ ಸಂಪಾದಕರೂ ಹೆಸರಾಂತ ಸಂಶೋಧಕರೂ ಆದ ಡಾ।। ಟಿ. ಎನ್. ನಾಗರತ್ನ. ಅವರು ತಮ್ಮ ಅಧ್ಯಕ್ಷ ಭಾಷಣ ಮಾಡುತ್ತಾ ಈ ವಿಚಾರಗೋಷ್ಠಿ ಕನ್ನಡ ಸಾಹಿತ್ಯ ಚರ್ಚೆಗೆ ಹೊಸದಾರಿಯನ್ನು ತೆರೆದುಕೊಟ್ಟಿದೆ. ಇನ್ನೊಂದು ಮಾರ್ಗವನ್ನು ಸೃಷ್ಟಿಸಿರುವ ಈ ವಿಶಿಷ್ಟಾದ್ವೈತ ಸಾಹಿತ್ಯವನ್ನು ಶೋಧಿಸಿ ಸಮರ್ಥವಾಗಿ ಸಂಪಾದಿಸಿಕೊಟ್ಟಿರುವ ವಿದ್ವಾಂಸರಾದ ಪ್ರೊ।। ನಾ. ಗೀತಾಚಾರ್ಯರನ್ನು ಸಮಸ್ತ ಕನ್ನಡಿಗರ ಪರವಾಗಿ ಅಭಿನಂದಿಸುತ್ತೇನೆ ಎಂದು ಹೇಳಿದರು. ಮೂರು ತತ್ವಗಳ ಮೂಲಕ ಜನಹಿತವನ್ನು ಸಾಧಿಸಿರುವ ವೈದಿಕ ಸಾಹಿತ್ಯಕ್ಕೆ ಆ ಮತ ಈ ಮತವೆಂದು ಮತೀಯ ಬಣ್ಣವನ್ನು ಹಚ್ಚದೇ 'ಇವ ನಮ್ಮವ, ಇವ ನಮ್ಮವ' ಎಂಬ ಸಮಷ್ಟಿ ದೃಷ್ಟಿಯಲ್ಲಿ ನೋಡಬೇಕೆಂದು ಕರೆಕೊಟ್ಟರು. ಕನಕದಾಸರನ್ನು ಎಲ್ಲರೂ ನಮ್ಮವನೆಂದು ಕರೆಯುವುದರಲ್ಲೇ ಅವರ ಸಾಹಿತ್ಯ ಶ್ರೇಷ್ಠತೆ ಅಡಗಿದೆ ಎಂದು ಹೇಳಿ, ಕವಿ ಮತ್ತು ಲೇಖಕರನ್ನು ಯಾವೊಬ್ಬ ಮತದವರೂ ತಮ್ಮ ಜಾತೀಯ ಸ್ವತ್ತನ್ನಾಗಿ ಪರಿವರ್ತಿಸಬಾರದು ಎಂದರು.

ಈ ಗೋಷ್ಠಿಯನ್ನು ಎಂ. ವಿ. ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಸಂಶೋಧನಾ ವಿದ್ಯಾರ್ಥಿ ಹರೀಶ್‌ರವರು ನಿರೂಪಿಸಿದರು.

ಈ ಸಮಾರಂಭದ ಸಮಾರೋಪ ಭಾಷಣ ಮಾಡಲು ಆಗಮಿಸಿದ್ದ ಆಂಧ್ರಪ್ರದೇಶದ ಅನಂತಪುರದ ಕೃಷ್ಣದೇವರಾಯ ವಿಶ್ವವಿದ್ಯಾಲಯದ ಪ್ರಾಧ್ಯಾಪಕರೂ ಪ್ರಸಿದ್ಧ ಸಂಶೋಧಕರೂ ಆದ ಡಾ।। ಆರ್. ಶೇಷಶಾಸ್ತ್ರೀಯವರು ಮಾತನಾಡುತ್ತಾ ವಿಜಯನಗರ ಕಾಲದಲ್ಲಿ ರೂಢಿಯಲ್ಲಿ ಇದ್ದ ದಾಸಕೂಟ ವ್ಯಾಸಕೂಟಗಳು ಈಗ ಪ್ರಚಲಿತವಿರುವ ಅರ್ಥಗಳಿಗಿಂತ ಭಿನ್ನವಾದ ನೆಲೆಯಲ್ಲಿ ಬಳಕೆಯಲ್ಲಿದ್ದವು. ವ್ಯಾಸರಾಯರ ಮಾಧ್ವ ಪರಂಪರೆಯನ್ನು 'ವ್ಯಾಸಕೂಟವೆಂದೂ, ವಿಶಿಷ್ಟಾದ್ವೈತ ಹರಿದಾಸ ಪರಂಪರೆಯನ್ನು ದಾಸಕೂಟ ಎಂದೂ ಜನಸಾಮಾನ್ಯರೂ ವಿದ್ವಾಂಸರೂ ಕರೆಯುತ್ತಿದ್ದುದರ ಬಗ್ಗೆ ಸಂಶೋಧನೆಗಳಿಂದ ಸಾಕ್ಷ್ಯಗಳು ದೊರಕುತ್ತಿವೆ ಈ ಬಗ್ಗೆ ಇನ್ನು ಹೆಚ್ಚಿನ ಅಧ್ಯಯನ ನಡೆಯಬೇಕಾಗಿದೆ ಎಂದು ಹೇಳಿ ಈ ವಿಶಿಷ್ಟಾದ್ವೈತ ಕುರಿತು ವಿಚಾರ ಸಂಕಿರಣ ಹರಿದಾಸ ಸಾಹಿತ್ಯದಲ್ಲೇ ಹೊಸ ದೃಷ್ಟಿಯದಾಗಿದ್ದು ಈ ಬಗೆಯ ಅನೇಕ ವಿಚಾರ ಸಂಕಿರಣಗಳು ನಡೆದು ವಿಶಿಷ್ಟಾದ್ವೈತದ ಮೇಲೆ ಹೊಸ ಬೆಳಕು ಚೆಲ್ಲಬೇಕು ಎಂದರು. ಡಾ।। ಆರ್. ಶೇಷಶಾಸ್ತ್ರೀಯವರು ತಿರುಪತಿಯ ಶ್ರೇಷ್ಠ ತೆಲುಗು ಶ್ರೀ ವೈಷ್ಣವ ಹರಿದಾಸರಾದ ಅನ್ನಮಾಚಾರ್ಯರ ಕುರಿತು ಮೂವತ್ತು ಸಾವಿರ ಕೀರ್ತನೆಗಳ ಸಂಶೋಧನಾ ಅಧ್ಯಯನವನ್ನು ಕೈಗೊಂಡಿದ್ದು ಅನ್ನಮಾಚಾರ್ಯರಿಗೂ ಕರ್ನಾಟಕದ ಹಂಪೆಗೂ

ಇರುವ ಸಂಬಂಧವನ್ನು ವಿವರಿಸುತ್ತಾ ಉಗ್ರನರಸಿಂಹನನ್ನು ಸುಗ್ರೀವನರಸಿಂಹನೆಂದು ಕೀರ್ತನೆಯಲ್ಲಿ ಪ್ರಸ್ತಾಪಿಸಿರುವುದನ್ನು ಎತ್ತಿ ತೋರಿಸಿದರು. ಅಲ್ಲದೇ ಈ ಅಧ್ಯಯನದಿಂದ ಕನ್ನಡ ಹರಿದಾಸ ಸಾಹಿತ್ಯದ ಮೇಲೆ ವಿಶೇಷವಾಗಿ ವಿಶಿಷ್ಟಾದ್ವೈತ ಸಾಹಿತ್ಯದ ಮೇಲೆ ಅನೇಕ ಹೊಸ ವಿಚಾರಗಳು ಹೊರಬೀಳಲಿವೆ ಎಂದು ಹೇಳಿದರು.

ಸಮಾರೋಪ ಭಾಷಣದ ಅಧ್ಯಕ್ಷತೆಯನ್ನು ವಹಿಸಿದ್ದ ಶ್ರೇಷ್ಠ ವಿದ್ವಾಂಸರೂ, ಬಿ.ಎಂ.ಶ್ರೀ. ಪ್ರತಿಷ್ಠಾನದ ಅಧ್ಯಕ್ಷರೂ ಆದ ಡಾ।। ಟಿ. ವಿ. ವೆಂಕಟಾಚಲಶಾಸ್ತ್ರಿಯವರು ಮಾತನಾಡುತ್ತಾ ಅನೇಕ ಜನ ಶ್ರೀ ವೈಷ್ಣವ ಸಾಹಿತಿ-ವಿದ್ವಾಂಸರು ಕನ್ನಡ ಸಾಹಿತ್ಯಕ್ಕೆ ಗಣನೀಯವಾದ ಕೊಡುಗೆ ಸಲ್ಲಿಸಿದ್ದರೂ ಈ ವಿಚಾರ ಈ ವರೆಗೆ ಚರ್ಚೆಗೆ ಬಾರದಿದ್ದುದು ಒಂದು ಕೊರತೆಯಾಗಿತ್ತು. ಇದೀಗ ನಾರಾಯಣಶರ್ಮ ಸಂಸ್ಕೃತಿ ಕೇಂದ್ರದ ಈ ಸಂಶೋಧನೆಯಿಂದ ಪೂರ್ಣವಾದಂತಾಗಿದೆ ಎಂದು ಅಭಿನಂದಿಸಿದರು. ಈವರೆಗೆ ಉಪನ್ಯಾಸ ನೀಡಿದ ವಿದ್ವಾಂಸರ ಉಪನ್ಯಾಸಗಳು ಶ್ರೇಷ್ಠವಾದ ವಿಚಾರಗಳಾಗಿದ್ದು ಇವು ಪುಸ್ತಕರೂಪದಲ್ಲಿ ಪ್ರತಿಷ್ಠಾನದಿಂದ ಹೊರಬರಲಿವೆ ಎಂದು ತಿಳಿಸಿದರು.

ಲೇಖಕರೂ, ನಿವೃತ್ತ ಪ್ರಾಚಾರ್ಯರೂ ಆದ ಪ್ರೊ।। ಬಿ. ಆರ್. ಸುರಪುರ ಮತ್ತು ಬೆಂಗಳೂರಿನ ಲೇಖಕಿ, ನಿವೃತ್ತ ಪ್ರಾಧ್ಯಾಪಕಿ ಡಾ।। ಎಂ. ಎಲ್. ಲಲಿತಮ್ಮ ಅವರುಗಳು ವಿಶೇಷ ಆಹ್ವಾನಿತರ ಪರವಾಗಿ ಮಾತನಾಡಿ ಇದೊಂದು ಅತ್ಯುಪಯುಕ್ತ ಮತ್ತು ಸಾಹಿತ್ಯ ಕ್ಷೇತ್ರಕ್ಕೆ ಹೊಸ ತಿರುವನ್ನು ನೀಡಿದ ವಿಶೇಷ ವಿಚಾರ ಸಂಕಿರಣವೆಂದು ಹೇಳುತ್ತಾ ಇದರ ರೂವಾರಿ ಪ್ರೊ।। ನಾ. ಗೀತಾಚಾರ್ಯ ಅವರನ್ನು ಅಭಿನಂದಿಸಿದರು.

ಈ ವಿಚಾರ ಸಂಕಿರಣದಲ್ಲಿ ವಿಶೇಷ ಆಹ್ವಾನಿತರಾಗಿ ಪ್ರೊ।। ಅ. ರಾ. ಮಿತ್ರ, ಶ್ರೀ ಎನ್. ಬಸವಾರಾಧ್ಯ, ಡಾ।। ಸುಮತೀಂದ್ರ ನಾಡಿಗ, ಡಾ।। ಎಚ್. ಎಸ್. ವೆಂಕಟೇಶಮೂರ್ತಿ, ಪ್ರೊ।। ಎಂ. ವಿ. ಸತ್ಯನಾರಾಯಣ, ಪ್ರೊ।। ಚಿ. ಶ್ರೀನಿವಾಸರಾಜು, ಡಾ।। ದೊಡ್ಡರಂಗೇಗೌಡ, ಪ್ರೊ।। ಡಿ. ಲಿಂಗಯ್ಯ, ಡಾ।। ನರಹಳ್ಳಿ ಬಾಲಸುಬ್ರಹ್ಮಣ್ಯ, ಡಾ।। ಬೈರಮಂಗಲ ರಾಮೇಗೌಡ, ಡಾ।। ಕೆ. ಗೋಕುಲನಾಥ್, ಡಾ।। ಕೆ. ಆರ್. ಗಣೇಶ್, ಡಾ।। ದೇವರಕೊಂಡಾರೆಡ್ಡಿ, ಡಾ।। ವಸಂತಲಕ್ಷ್ಮಿ, ಡಾ।। ಕು. ಸಾ. ಅಪರ್ಣ, ಶ್ರೀ ತಿರುಮಲೇಶ ಶ್ರಿರಂಗಾಚಾರ್, ಡಾ।। ಚಿಕ್ಕಹೆಜ್ಜಾಜಿ ಮಹದೇವ್, ಡಾ।। ಎಸ್. ವಿ. ಪ್ರಭಾವತಿ, ಡಾ।। ಎಂ.ಎಲ್. ಲಲಿತಮ್ಮ ಡಾ।। ಹರೀಶ್, ಡಾ।। ಎಚ್. ಎನ್. ಮುರಳೀಧರ್, ಶ್ರೀ ಎಚ್. ಎಸ್. ವೇಣುಗೋಪಾಲ್, ಶ್ರೀಮತಿ ಎ. ಪಂಕಜ. ಶ್ರೀ ವೈ. ಕೆ. ಮೋಹನ್, ಶ್ರೀ ಎಸ್. ವಿ. ಶ್ರೀನಿವಾಸರಾವ್, ಶ್ರೀ ಎನ್. ಎಸ್. ರಾಮಸ್ವಾಮಿ ಅಯ್ಯರ್, ಪ್ರೊ।. ಬಿ. ಆರ್. ಸುರಪುರ, ಪ್ರೊ।। ಧ್ರುವನಾರಾಯಣ ಉಪಸ್ಥಿತರಿದ್ದರು.

ವಿಚಾರ ಸಂಕರಣದ ಅಂಗವಾಗಿ ಸಾಂಸ್ಕೃತಿಕ ಕಾರ್ಯಕ್ರಮವು ಸಂಜೆ ವಿಶಿಷ್ಟಾದ್ವೈತ ಸಾಹಿತ್ಯ ಕೀರ್ತನ ಗಾಯನ ಕಮಲಕುಮಾರ್ ಮತ್ತು ತಂಡದವರಿಂದ ನಡೆಯಿತು.

-ಮುತ್ತುರಾಜು

# (ಅ) ಶತಮಾನೋತ್ಸವಗಳು

## (೧) ಕುವೆಂಪು ಶತಮಾನೋತ್ಸವ :

ಡಿಸೆಂಬರ್ 20, 2004ಕ್ಕೆ ಕುವೆಂಪು ಶತಮಾನೋತ್ಸವ ಪೂರ್ಣವಾದರೂ ಸರ್ಕಾರ ಇನ್ನೂ ಸಮಾರೋಪ ಸಮಾರಂಭವನ್ನು ಮಾಡಿಲ್ಲ. ನಿಗದಿಯಾಗಿದ್ದ ಸಮಾರಂಭವನ್ನು ಎರಡುಬಾರಿ ಮುಂದೂಡಲಾಗಿದೆ. ಮೊದಲಬಾರಿಗೆ ಚುನಾವಣಾ ನೀತಿ ಸಂಹಿತೆಯ ಕಾರಣದಿಂದ ಮತ್ತು ಎರಡನೇಬಾರಿ ರಾಷ್ಟ್ರೀಯ ಶೋಕಾಚರಣೆ ಕಾರಣದಿಂದ. ಸಾಂಸ್ಕೃತಿಕ ಲೋಕದ ಮಹತ್ವದ ಕಾರ್ಯಕ್ರಮವಾಗಬೇಕಾಗಿದ್ದ ಈ ಕಾರ್ಯಕ್ರಮ ಸರ್ಕಾರಿ ಕಾರ್ಯಕ್ರಮವಾಗಿ ಪರಿವರ್ತನೆಯಾದುದು ಈ ಸಮಾರಂಭ ಸರ್ಕಾರದ ನೀತಿ-ನಿಯಮಗಳಿಗೆ ಸಿಕ್ಕಿ ಸೊರಗುತ್ತಿದೆ. ಆರಂಭದಿಂದ ಕೊನೆಯವರೆಗೂ ವಿಘ್ನಗಳ ಜೊತೆಯಲ್ಲೇ ಬರುತ್ತಿದೆ. ಸರ್ಕಾರ ಆರಂಭದಲ್ಲಿ ಘೋಷಿಸಿದ್ದ ಯೋಜನೆಗಳು ಇನ್ನು ಕಾರ್ಯಗತವಾಗಿಲ್ಲ. ಕುವೆಂಪು ಅಧ್ಯಯನ ಕೇಂದ್ರವಾಗಲಿ, ಕುವೆಂಪು ಮಾದರಿ ಶಾಲೆಗಳಾಗಲಿ ಇನ್ನು ಕಡತಗಳಲ್ಲೇ ಕುಳಿತಿವೆ. ಕೋಟ್ಯಾಂತರ ರೂಪಾಯಿಗಳನ್ನು ಖರ್ಚುಮಾಡುತ್ತಿದ್ದರೂ ಶಾಶ್ವತವಾಗಿ ದಾಖಲೆಯಾಗಿ ಉಳಿಯುವಂತಹ ಒಂದು ಸಂಸ್ಮರಣ ಸಂಪುಟವನ್ನು ಈ ಯೋಜನೆ ಹೊಂದಿಲ್ಲ. ಕುವೆಂಪು ಸಾಹಿತ್ಯದ ಶ್ರೇಷ್ಠತೆಯನ್ನು ರಾಷ್ಟ್ರೀಯವಾಗಿ ಬಿಂಬಿಸುವಂತಹ ರಾಷ್ಟ್ರಮಟ್ಟದ ಒಂದೇ ಒಂದು ವಿಚಾರಗೋಷ್ಠಿಯೂ ನಡೆದಿಲ್ಲ. ಕುವೆಂಪು ಹೆಸರಿನ ಅಂಚೆ ಚೀಟಿಯನ್ನು ಪ್ರಕಟಿಸುವ ಯಾವ ಪ್ರಯತ್ನವೂ ನಡೆಯಲಿಲ್ಲ.

ಇಷ್ಟೊಂದು ಹಣ ಖರ್ಚಾದರೂ ಸರ್ಕಾರದ ಮೂಲಕವಾಗಲಿ ಖಾಸಗಿ ಸಂಸ್ಥೆಗಳಿಂದಾಗಲಿ ಆಗಲೇಬೇಕಾಗಿದ್ದ ಈ ಮೂರು ಯೋಜನೆಗಳು ಈ ಸಂದರ್ಭದಲ್ಲಿ ಕರ್ನಾಟಕದ ಸಂಸ್ಕೃತಿಯನ್ನು ಕಟ್ಟುವ ದೃಷ್ಟಿಯಿಂದ ಒಂದು ದೊಡ್ಡ ಕೊರತೆಯಾಯಿತು. ರಾಷ್ಟ್ರಮಟ್ಟದಲ್ಲಿ ಸುಲಭವಾಗಿ ನಿರ್ಮಿಸಬಹುದಾಗಿದ್ದ ಕರ್ನಾಟಕದ ಕೀರ್ತಿ ಸಾಂಸ್ಕೃತಿಕ ವಲಯದ ಮತ್ತು ಸರ್ಕಾರದ ಕಣ್ಣಿಗೆ ಕಾಣಿಸದೆ ಹೋದದ್ದು ಆಶ್ಚರ್ಯಕರ. ಸರ್ಕಾರ ಈಗಲೂ ಇತ್ತ ಗಮನ ಹರಿಸಿ, ಸಾಹಿತಿಗಣ್ಯರು ಸಂಘಸಂಸ್ಥೆಗಳು ಸರ್ಕಾರವನ್ನು ಈ ಯೋಜನೆಗಳ ಅನುಷ್ಠಾನದಲ್ಲಿ ಮುನ್ನೆಡೆಸಿ ಕರ್ನಾಟಕದ ಕೀರ್ತಿಯನ್ನು ರಾಷ್ಟ್ರಮಟ್ಟದಲ್ಲಿ ಬಿಂಬಿಸುವಂತಾಗಲಿ ಎಂದು 'ಲೋಚನ ಪ್ರತಿಷ್ಠಾನ' ಆಶಿಸುತ್ತವೆ.

**(೨) ಪು.ತಿ.ನ. ಶತಮಾನೋತ್ಸವ** : ಮಾರ್ಚ್ 17, 2005 ಕ್ಕೆ ಅಂತ್ಯವಾಗುವಂತೆ ವರ್ಷವಿಡೀ ಆಚರಣೆಯಾದ ಪು.ತಿ. ನ. ಶತಮಾನೋತ್ಸವವನ್ನು ಸರ್ಕಾರ ರಚಿಸಿರುವ ಡಾ|| ಪು.ತಿ.ನ. ಟ್ರಸ್ಟ್ ಯಶಸ್ವಿಯಾಗಿ ನಡೆಸಿತು. ಅಷ್ಟೇನೂ ಅಬ್ಬರವಿಲ್ಲದೆ ಆದರೆ ಅರ್ಥಪೂರ್ಣವಾಗಿ ನಡೆದ ಈ ಶತಮಾನೋತ್ಸವ ಯೋಜನೆಯಲ್ಲಿ ಹಲವು ಮೌಲಿಕ ವಿಚಾರಗೋಷ್ಠಿಗಳು ಹಾಗೂ ಪ್ರಕಟನೆಗಳು ಗಮನಸೆಳೆದವು. ಡಾ|| ಪು.ತಿ.ನ. ಟ್ರಸ್ಟಿನ ಸಹಯೋಗದಲ್ಲಿ ಬಿ.ಎಂ.ಶ್ರೀ. ಪ್ರತಿಷ್ಠಾನವೂ ಪು.ತಿ.ನ. ಅವರ ಶ್ರೀಹರಿಚರಿತೆಯನ್ನು ಕುರಿತ ಒಂದು ದಿನದ ವಿಚಾರಗೋಷ್ಠಿಯನ್ನು ನಡೆಸಿತು. ಪು.ತಿ.ನ. ಶತಮಾನೋತ್ಸವ ಸಮಾರಂಭ ಕಲಾಕ್ಷೇತ್ರದಲ್ಲಿ17-3-05 ರಂದು ನಡೆಯಿತು. ಈ ಸಂದರ್ಭದಲ್ಲಿ ಟ್ರಸ್ಟ್ ನ ಮೂಲಕ

ಶತಮಾನೋತ್ಸವ ನೆನಪಿಗಾಗಿ ಗ್ರಂಥಗಳು ಮತ್ತು ಸುಮುಖ ಪ್ರಕಾಶನದ 'ಪು.ತಿ.ನ. ನೂರರ ನೆನಪು' ಎಂಬ ಸಂಸ್ಕರಣ ಸಂಪುಟ ಬಿಡುಗಡೆಯಾಯಿತು. ಶ್ರೀಮತಿ ಕಮಲ ನರಸಿಂಹ ಸಂಪಾದಿಸಿರುವ 'ಪು.ತಿ.ನ. ನೂರರ ನೆನಪು' ಡೆಮ್ಮಿ ಅಷ್ಟದಳಾಕಾರದ 296 ಪುಟಗಳಲ್ಲಿ ಸುಂದರವಾಗಿ ಮುದ್ರಣವಾಗಿದೆ. 2 ಎರಡು ಭಾಗಗಳಲ್ಲಿ ಸು. 37 ಹಿರಿಯ-ಕಿರಿಯ ಗಣ್ಯ ಲೇಖಕರ ಲೇಖನಗಳು ಇದರಲ್ಲಿವೆ. ಬದುಕು ಬರಹ, ಪು.ತಿ.ನ. ರವರ ಕಾವ್ಯ ಕಾವ್ಯ, ಕವನಗಳು, ಗದ್ಯಭಾಗ, ಕಾವ್ಯದ ವಿಚಾರಗಳು, ನವಿಲುಗರಿ, ಕಾವ್ಯನಮನ-ಹೆಸರಿನ ಈ ಭಾಗಗಳಲ್ಲಿರುವ ಬಹುಪಾಲು ಬರಹಗಳು ಈಗಾಗಲೆ ಬೇರೆಡೆ ಪ್ರಕಟವಾಗಿರುವವುಗಳು. ಕೆಲವು ಈ ಗ್ರಂಥಕ್ಕಾಗಿಯೇ ಬರೆಸಿದ ಲೇಖನಗಳೂ ಇವೆ. ಕೊನೆಯ ಭಾಗದಲ್ಲಿ ಪುತಿನರನ್ನು ಕುರಿತು ಹತ್ತು ಕವಿತೆಗಳಿವೆ ಉಳಿದ ಭಾಗಗಳಲ್ಲಿ. ಪು.ತಿ.ನ. ಅವರ ವ್ಯಕ್ತಿತ್ವ ಮತ್ತು ಸಾಹಿತ್ಯವನ್ನು ಕುರಿತು ಡಾ|| ದೇ.ಜ.ಗೌ., ಸುಜನ, ಡಾ|| ಜಿ. ಎಸ್. ಎಸ್., ಡಾ|| ಎಲ್. ಎಸ್. ಎಸ್., ಡಾ|| ಹಂಪನ, ಡಾ|| ಸಾ. ಶಿ. ಮರುಳಯ್ಯ, ಡಾ|| ದೊಡ್ಡರಂಗೇಗೌಡ ಮುಂತಾದ ಪ್ರಸಿದ್ಧ ಲೇಖಕರು ಬರೆದ ಲೇಖನಗಳಿವೆ.

ಡಾ|| ಪು.ತಿ.ನ. ಅವರ ಸಾಹಿತ್ಯದ ದಿಗ್ದರ್ಶನವನ್ನು ಮೂಡಿಸುವ ಈ ಶತಮಾನ ಸಂಪುಟ ಪು.ತಿ.ನ. ಸಾಹಿತ್ಯದ ಅಧ್ಯಯನಕ್ಕೆ ಒಂದು ಪ್ರಮುಖ ಆಕರ ಗ್ರಂಥವಾಗಿದೆ. ಡಾ|| ಪ್ರಧಾನ ಗುರುದತ್ ಅವರ ಮುನ್ನುಡಿಯಿರುವ ಈ ಸಂಪುಟವನ್ನು ಸಂಪಾದಿಸಿರುವ ಕಮಲ ನರಸಿಂಹನ್ ಮತ್ತು ಪ್ರಕಾಶಕ ನಾರಾಯಣ ಮಳ್ಳೋಡ್ ಅಭಿನಂದನಾರ್ಹರಾಗಿದ್ದಾರೆ. ಪು.ತಿ.ನ. ಟ್ರಸ್ಟ್ ಈ ಗ್ರಂಥವನ್ನು ಪ್ರಕಟಿಸಿದೆ.

**(೩) ಡಾ|| ಸಿಂಪಿ ಲಿಂಗಣ್ಣ ಶತಮಾನೋತ್ಸವ :**

ಜಾನಪದ ಸಾಹಿತ್ಯದ ದಿಗ್ಗಜರೆನಿಸಿರುವ ಡಾ|| ಸಿಂಪಿಲಿಂಗಣ್ಣನವರು 1992 ರಲ್ಲಿ ಕೊಪ್ಪಳದಲ್ಲಿ ನಡೆದ 62ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರಲ್ಲದೆ ಆದರ್ಶ ಶಿಕ್ಷಕರಾಗಿ ರಾಷ್ಟ್ರಪ್ರಶಸ್ತಿಯನ್ನು ಗಳಿಸಿದ್ದರು. ಗರತಿಯ ಬಾಳು, ಜನಾಂಗದ ಜೀವಾಳ, ನೂರುಗಡಿಗೆ ಒಂದು ಬಡಿಗೆ, ಉತ್ತರ ಕರ್ನಾಟಕದ ಜನಪದ ಕಥೆಗಳು ಮುಂತಾದ ಜನಪದ ಕೃತಿಗಳನ್ನು ರಚಿಸಿರುವ ಮೂಲಕ ಸಿಂಪಿ ಲಿಂಗಣ್ಣನವರು ಕರ್ನಾಟಕದ ಜಾನಪದ ಸಾಹಿತ್ಯ ಅಧ್ಯಯನದ ಮೂಲ ಪುರುಷರ ಅಗ್ರಗಣ್ಯರೆನಿಸಿದ್ದಾರೆ. ಇವರ ಶತಮಾನೋತ್ಸವವನ್ನು ನಾಡು ಅರ್ಥಪೂರ್ಣವಾಗಿ ಆಚರಿಸಬೇಕಾಗಿದೆ. ಜೀವಿತಕಾಲ 11-2-1905 ರಿಂದ 5-5-1993.

(4) ಇದೇ ವರ್ಷ ರಾ.ಶಿ. (ಡಾ|| ಎಂ. ಶಿವರಾಂ 10-11-05) ತ.ಸು. ಶಾಮರಾವ್ ಅವರ ಶತಮಾನೋತ್ಸವ ಮತ್ತು 2006 ರಲ್ಲಿ ಡಿ.ಎಲ್.ಎನ್. (27-10-06), ಡಾ|| ರಂ. ಶ್ರೀಮೂಗಳ (15-7-06), ಆ. ನೆ. ಉಪಾಧ್ಯೆ (6-2-06), ಪ್ರೊ|| ತೀ. ನಂ. ಶ್ರೀ (26-11-06), ತ.ರಾ.ಸು. (12-6-06), ಪ್ರೊ|| ಕೆ. ವೆಂಕಟರಾಮಪ್ಪ (28-5-06), ಪ್ರೊ|| ಎಂ. ಮರಿಯಪ್ಪ ಭಟ್ಟಮುಂತಾದ ಅನೇಕ ಗಣ್ಯರ ಶತಮಾನೋತ್ಸವಗಳು ಬರಲಿವೆ. ಸರ್ಕಾರ, ಸಂಘ ಸಂಸ್ಥೆಗಳು ಸೂಕ್ತ ರೀತಿಯಲ್ಲಿ ಆಚರಿಸಬೇಕಾಗಿವೆ.

## (ಆ) ದತ್ತಿ ಕಾರ್ಯಕ್ರಮಗಳು

**1) ಬಿ.ಎಂ.ಶ್ರೀ. ಪ್ರತಿಮೆಗೆ ಮಾಲಾರ್ಪಣೆ :** 3-1-05 ರಂದು ಬಿ.ಎಂ.ಶ್ರೀ. ಜನ್ಮದಿನದ ಸಂದರ್ಭದಲ್ಲಿ ಬಿ.ಎಂ.ಶ್ರೀ. ದತ್ತಿ ಕಾರ್ಯಕ್ರಮದ ಅಂಗವಾಗಿ ನ್ಯಾಷನಲ್ ಕಾಲೇಜಿನ ವೃತ್ತದಲ್ಲಿರುವ ಬಿ.ಎಂ.ಶ್ರೀ. ಪ್ರತಿಮೆಗೆ ಮಾಲಾರ್ಪಣೆ ಮಾಡಲಾಯಿತು. ಬಿ.ಎಂ.ಶ್ರೀ. ಬಂಧುಗಳಾದ ಶ್ರೀ ಎಚ್. ಕೆ. ಸೀತಾರಾಂ ಮತ್ತು ಶ್ರೀಮತಿ ಪ್ರಭಾವತಿ ಶಿವಶಂಕರ್ ಅವರಿಂದ ಪ್ರತಿಮೆಗೆ ಮಾಲಾರ್ಪಣೆ ಕಾರ್ಯಕ್ರಮ ಜರುಗಿತು. ಮುಖ್ಯ ಅತಿಥಿಗಳಾಗಿ ಶ್ರೀ ಎಸ್. ವಿ. ಶ್ರೀನಿವಾಸರಾವ್, ಶ್ರೀ ಎನ್. ಎಸ್. ಕೃಷ್ಣಸ್ವಾಮಿ ಮತ್ತು ಶ್ರೀ ಸಿ. ಕೆ ರಾಮೇಗೌಡ ಅವರುಗಳು ಭಾಗವಹಿಸಿದ್ದರು. ಶ್ರೀಮತಿ ಜಯಾ ಪಾರ್ಥಸಾರಥಿ ಮತ್ತು ಶ್ರೀಮತಿ ರಮಾದೇವಿ ವಿಶ್ವೇಶ್ವರಯ್ಯ ಅವರಿಂದ ಬಿ.ಎಂ.ಶ್ರೀ. ಭಾವಗೀತೆ ಕಾರ್ಯಕ್ರಮ ನಡೆಯಿತು.

**2) ಡಾ।। ಶಾಂತಾ ಪ್ರಭುಶಂಕರ ದತ್ತಿ :** 27-2-05 ರಂದು ಈ ದತ್ತಿ ಕಾರ್ಯಕ್ರಮ ನಡೆಯಿತು. ಡಾ।। ಎಂ. ವಿ. ಪ್ರಶಾಂತ ಅವರು "ಆರೋಗ್ಯಕ್ಕೆ ಆಯುರ್ವೇದದ ಅಗತ್ಯ" ವಿಷಯ ಕುರಿತು ಉಪನ್ಯಾಸ ನೀಡಿದರು. ಡಾ।। ಹೆಚ್. ಕೆ. ನಾಗರಾಜ್ ಅವರು ಅಧ್ಯಕ್ಷತೆ ವಹಿಸಿದ್ದರು.

**3) ಚಂದ್ರಶೇಖರ ಶರ್ಮ ದತ್ತಿ ಉಪನ್ಯಾಸ :** 28-2-05 ರಂದು ಈ ಉಪನ್ಯಾಸ ನಡೆಯಿತು. ಧಾರವಾಡದ ಖ್ಯಾತ ಸಾಹಿತಿ ಡಾ।। ಕುಸುಮಾಕರ ದೇವರ ಗೆಣ್ಣೂರು ಅವರು 'ದ. ರಾ. ಬೇಂದ್ರೆ ಮತ್ತು ಅವರ ಕಾವ್ಯ' ವಿಷಯದ ಬಗ್ಗೆ ಉಪನ್ಯಾಸ ನೀಡಿದರು. ಡಾ।। ಸುಮತೀಂದ್ರ ನಾಡಿಗ್ ಅವರು ಅಧ್ಯಕ್ಷತೆ ವಹಿಸಿದ್ದರು.

**4) ಯಂ. ಕೆ. ವಿಜಯಲಕ್ಷ್ಮಿ ಸ್ಮಾರಕ ದತ್ತಿ ಉಪನ್ಯಾಸ :** 11-3-05 ರಂದು ಡಾ।। ಹೋ. ಶ್ರೀ. ಮದನಕೇಸರಿ ಅವರು ಈ ದತ್ತಿಯನ್ನು ಉದ್ಘಾಟನೆ ಮಾಡಿದರು. ಪ್ರೊ।। ಜಿ ಅಶ್ವತ್ಥನಾರಾಯಣ ಅವರು "ಭುವನಹಳ್ಳಿ ಡಿ. ಪದ್ಮನಾಭ ಶರ್ಮಾ ಅವರ 'ಕನ್ನಡ ಪ್ರಾಣಪ್ರಿಯ ಕಾವ್ಯ' - ಪರಿಚಯ" ವಿಷಯ ಕುರಿತು ಮಾತನಾಡಿದರು. ದತ್ತಿ ದಾತೃಗಳಾದ ಶ್ರೀ ಯಂ. ಕೆ. ರವೀಂದ್ರನಾಥ ಮತ್ತು ಲೇಖಕಿ ಶ್ರೀಮತಿ ಎಸ್. ಜಿ. ಮಾಲತಿಶೆಟ್ಟಿ ಅವರುಗಳು ಮುಖ್ಯ ಅತಿಥಿಗಳಾಗಿ ಭಾಗವಹಿಸಿದರು. ಅಧ್ಯಕ್ಷರಾದ ಡಾ।। ಟಿ. ವಿ. ವೆಂಕಟಚಲಶಾಸ್ತ್ರೀ ಅವರು ಅಧ್ಯಕ್ಷತೆ ವಹಿಸಿದ್ದರು.

**5) ಸಾವಿತ್ರಮ್ಮ ದತ್ತಿ ಮಾಹಿಳಾ ಸಾಹಿತ್ಯ ಪ್ರಶಸ್ತಿ ಮತ್ತು ಅನಂತರಂಗ ದತ್ತಿ ಸಂಶೋಧನಾ ಸಾಹಿತ್ಯ ಪ್ರಶಸ್ತಿ ವಿತರಣೆ :** 12-3-05 ರಂದು ಹಂಪಿಯ ಡಾ।। ಎಸ್. ಟಿ. ಹಳ್ಳಿಕೇರಿ ಅವರಿಗೆ 2003ನೇ ಸಾಲಿನ ಸಂಶೋಧನಾ ಸಾಹಿತ್ಯ ಪ್ರಶಸ್ತಿಯನ್ನೂ, ಹಂಪಿಯ ಡಾ।। ಶೈಲಜಾ ಹಿರೇಮಠ ಅವರಿಗೆ ಸಾವಿತ್ರಮ್ಮ ದತ್ತಿ ಮಹಿಳಾ (ಸೃಜನೇತರ) ಸಾಹಿತ್ಯ ಪ್ರಶಸ್ತಿಯನ್ನು ಹಿರಿಯ ಗಾಂಧಿವಾದಿಗಳಾದ ಶ್ರೀ ಎಚ್. ಎಸ್. ದೊರೆಸ್ವಾಮಿ ಅವರು ವಿತರಣೆ ಮಾಡಿದರು. ಖ್ಯಾತ ಲೇಖಕಿ ಶ್ರೀಮತಿ ಎ. ಪಂಕಜ ಅವರು ಮುಖ್ಯ ಅತಿಥಿಗಳಾಗಿದ್ದರು. ಅಧ್ಯಕ್ಷರಾದ ಡಾ।। ಟಿ. ವಿ. ವೆಂಕಟಾಚಲಶಾಸ್ತ್ರೀ ಅವರು ಅಧ್ಯಕ್ಷತೆ ವಹಿಸಿದ್ದರು.

6) **'ಐತಿಹಾಸಿಕ ರತ್ನ' ಎಸ್. ಶ್ರೀಕಂಠಯ್ಯ ಸ್ಮಾರಕ ದತ್ತಿ ಕಾರ್ಯಕ್ರಮ** : 22-4-05 ರಂದು ಡಾ|| ಜಿ. ಎಸ್. ದೀಕ್ಷಿತ್ ಮತ್ತು ಕರ್ನಾಟಕ ಇತಿಹಾಸ ವಿಷಯದ ಬಗ್ಗೆ ಖ್ಯಾತ ಲೇಖಕರಾದ ಡಾ|| ಹೆಚ್. ಎಸ್. ಗೋಪಾಲರಾವ್ ಅವರು ಉಪನ್ಯಾಸ ನೀಡಿದರು. ಇತಿಹಾಸ ತಜ್ಞರಾದ ಡಾ|| ಸೂರ್ಯನಾಥ್ ಕಾಮತ್ ಅವರು ಅಧ್ಯಕ್ಷತೆ ವಹಿಸಿದ್ದರು.

7) **ಪ್ರೊ|| ಬಿ. ರಾಮಸ್ವಾಮಿ ದತ್ತಿ ಕಾರ್ಯಕ್ರಮ** : 14-5-05 ರಂದು ಪ್ರೊ|| ಬಿ. ರಾಮಸ್ವಾಮಿ ಅವರ ಬದುಕು-ಬರಹ ವಿಷಯದ ಬಗ್ಗೆ ಗುಲಬರ್ಗದ ಪ್ರಸಿದ್ಧ ಸಾಹಿತಿಗಳಾದ ಪ್ರೊ|| ವಸಂತ ಕುಷ್ಟಗಿ ಅವರು ಪ್ರಥಮ ದತ್ತಿ ಉಪನ್ಯಾಸ ನೀಡಿದರು. ಶ್ರೀಮತಿ ಸಾವಿತ್ರಮ್ಮ ರಾಮಸ್ವಾಮಿ ಅವರು ಮುಖ್ಯ ಅತಿಥಿಗಳಾಗಿದ್ದರು. ಅಧ್ಯಕ್ಷರಾದ ಡಾ|| ಟಿ. ವಿ. ವೆಂಕಟಾಚಲಶಾಸ್ತ್ರೀ ಅವರು ಅಧ್ಯಕ್ಷತೆ ವಹಿಸಿದ್ದರು. ಮೊದಲಿಗೆ ಗುಲಬರ್ಗದ ಇನ್ನೊಬ್ಬ ಸಾಹಿತಿಗಳಾದ ಪ್ರೊ|| ಟಿ. ಆರ್. ಸುರಪುರ ಅವರು ಈ ದತ್ತಿಯನ್ನು ಉದ್ಘಾಟಿಸಿದರು. ದತ್ತಿ ದಾತೃಗಳಾದ ಶ್ರೀಮತಿ ಸಾವಿತ್ರಮ್ಮರಾಮಸ್ವಾಮಿ ಅವರು ಮುಖ್ಯ ಅತಿಥಿಗಳಾಗಿದ್ದರು.

8) **ಡಾ|| ಎಂ. ಎ. ಜಯಚಂದ್ರ ದತ್ತಿ ಉಪನ್ಯಾಸ** : 10-6-05 ರಂದು 'ಜೈನ ಮಹಾಭಾರತ' ವಿಷಯದ ಬಗ್ಗೆ ಡಾ|| ಎಂ. ಎನ್. ಸುಮಿತ್ರಾಬಾಯಿ ಅವರು ಮಾತನಾಡಿದರು ಶ್ರೀ ಎಸ್. ಬಿ. ವಸಂತರಾಜಯ್ಯ ಅವರು ಅಧ್ಯಕ್ಷತೆ ವಹಸಿದ್ದರು. ದತ್ತಿ ದಾತೃಗಳಾದ ಡಾ|| ಎಂ. ಎ. ಜಯಚಂದ್ರ ಅವರು ಉಪಸ್ಥಿತರಿದ್ದರು.

### (ಇ) ಇತರೆ ಕಾರ್ಯಕ್ರಮಗಳು :

**ಪ್ರೊ|| ಬಿ. ಸಿ. ರಾಮಚಂದ್ರ ಶರ್ಮ ಮತ್ತು ಎಸ್ಕೆ ಅವರಿಗೆ ಶ್ರದ್ಧಾಂಜಲಿ ಕಾರ್ಯಕ್ರಮ** : ............ರಂದು ನಡೆದ ಈ ಕಾರ್ಯಕ್ರಮದಲ್ಲಿ ಖ್ಯಾತ ಸಾಹಿತಿಗಳಾದ ಡಾ|| ಸುಮತೀಂದ್ರ ನಾಡಿಗ್, ಶ್ರೀ ಎಸ್. ಟಿ. ರಾಧಾಕೃಷ್ಣ, ಶ್ರೀ ಜಿ. ಎಂ. ಶಿರಹಟ್ಟಿ, ಶ್ರೀಮತಿ ಯಮುನಾ ಮೂರ್ತಿ ಅವರುಗಳು ಭಾಗವಹಿಸಿ ದಿವಂಗತರ ಬಗ್ಗೆ ತಮ್ಮ ಅನುಭವದ ನೆನಪುಗಳನ್ನು ಹಂಚಿಕೊಂಡರು. ಅಗ್ಯಕ್ಷರಾದ ಡಾ|| ಟಿ. ವಿ. ವೆಂಕಟಾಚಲಶಾಸ್ತ್ರೀ ಅವರು ಅಧ್ಯಕ್ಷತೆ ವಹಿಸಿದ್ದರು. ನಂತರ ಸಭೆ ಸಂತಾಪ ಸೂಚಕ ನಿರ್ಣಯವನ್ನು ಓದಿ ದಿವಂಗತರ ಆತ್ಮಕ್ಕೆ ಶಾಂತಿಯನ್ನು ಕೋರಿ ಒಂದು ನಿಮಿಷ ಮೌನ ಆಚರಿಸಿತು.

### (ಈ) 'ಸಿರಿಸಂಗೀತ ಕಾರ್ಯಕ್ರಮಗಳು :

1) ದಿ. 12-3-05 ರಂದು ಶ್ರೀಮತಿ ನೇತ್ರ, ಎಸ್. ನಾಥ್ ಮತ್ತು ತಂಡದವರಿಂದ 'ಸಿರಿಸಂಗೀತ' ಕಾರ್ಯಕ್ರಮ ನಡೆಯಿತು. ದಾಸರ ಹಾಡುಗಳನ್ನು ಹಿಂದೂಸ್ಥಾನಿ ಶೈಲಿಯಲ್ಲಿ ಸುಶ್ರಾವ್ಯವಾಗಿ ಹಾಡಿ ಸಭಿಕರನ್ನ ರಂಜಿಸಿದರು.

2) 21-4-05 ರಂದು ಶ್ರೀಮತಿ ಅನುಸೂಯದೇವಿ ಮತ್ತು ದಂಡದವರಿಂದ ಸಿರಿಸಂಗೀತ ಮಾಲೆಯ 4ನೇ ಕಾರ್ಯಕ್ರಮ ನಡೆಯಿತು. ಜಾನಪದ ಗೀತೆಗಳನ್ನು ಸೊಗಸಾಗಿ ಹಾಡಿದರು. ಪ್ರೊ|| ಡಿ. ಲಿಂಗಯ್ಯ ಅವರು ಅಧ್ಯಕ್ಷತೆ ವಹಿಸಿದ್ದರು.

3) 16-5-05 ರಂದು 'ಸಿರಿಸಂಗೀತ' ಮಾಲೆಯ 5ನೇ ಕಾರ್ಯಕ್ರಮ ನಡೆಯಿತು. ಕಲಾವಿದರಾದ ವಿದ್ವಾನ್ ಟಿ. ವಿ. ಸುಬ್ಬರಾವ್ ಮತ್ತು ಶ್ರೀಮತಿ ಡಿ. ಶಶಿಕಲಾ ಅವರು ತಮ್ಮ ತಂಡದವರೊಂದಿಗೆ 'ವಚನಗಾಯನ' ಕಾರ್ಯಕ್ರಮವನ್ನು ನಡೆಸಿಕೊಟ್ಟರು.

4) 11-7-05 ರಂದು 'ಸಿರಿಸಂಗೀತ' ಮಾಲೆಯ 6ನೇ ಕಾರ್ಯಕ್ರಮ ನಡೆಯಿತು. ಶ್ರೀಮತಿ ಪದ್ಮ ವೆಂಕಟೇಶಮೂರ್ತಿ ಮತ್ತು ಶ್ರೀಮತಿ ಹೀರಾಬಾಯಿಯವರ ತಂಡದವರಿಂದ 'ತತ್ವಪದಗಳ ಗಾಯನ' ಕಾರ್ಯಕ್ರಮ ನಡೆಯಿತು.

* * * *

# ದಾನಗಳು

## (ಅ) ಪ್ರತಿಷ್ಠಾನಕ್ಕೆ ದಾನ

| | |
|---|---|
| 1) ಶ್ರೀ ಆನಂದರಾಮರಾವ್ ಎನ್., ಬೆಂಗಳೂರು | 5,001-00 |
| 2) ಶ್ರೀ ವೀರಪ್ಪ ಮರಳವಾಡಿ, ಬೆಂಗಳೂರು | 500-00 |
| 3) ಶ್ರೀ ಟಿ. ವಿ. ಸುಬ್ಬರಾವ್, ಬೆಂಗಳೂರು | 116-00 |
| 4) ಡಾ॥ ಹೆಚ್. ಕೆ. ನಾಗರಾಜ್, ಬೆಂಗಳೂರು | 100-00 |
| 5) ಶ್ರೀ ಕೆಳದಿ ಗುಂಡಾಜೋಯಿಸ್, ಕೆಳದಿ | 50-00 |

## (ಆ) ವಿವಿಧ ಉದ್ದೇಶಗಳಿಗೆ ದಾನ

| | |
|---|---|
| 1) ಡಾ॥ ಪು.ತಿ.ನ. ಟ್ರಸ್ಟ್, (ಪು.ತಿ.ನ. ವಿಚಾರಗೋಷ್ಠಿಗೆ) | 10,000-00 |
| 2) ತಿರುಮಲ ತಿರುಪತಿ ದೇವಾಲಯ ಸಮಿತಿ (ಪುಸ್ತಕ ಪ್ರಕಟನೆಗೆ) | 7,708-00 |
| 3) ಶ್ರೀಮತಿ ಮನೋಹರಿ ಪಾರ್ಥಸಾರಥಿ, ('ಸಿರಿಸಂಗೀತ ಕಾರ್ಯಕ್ರಮಕ್ಕೆ) | 3,000-00 |
| 4) ಶ್ರೀ ಗರತಿಹಳ್ಳಿ ರಾಘವಣ್ಣ, ಶಿವಮೊಗ್ಗ (ರಜತೋತ್ಸವಕ್ಕೆ) | 2,000-00 |
| 5) ಪ್ರೊ॥ ಬಿ. ನಾರಾಯಣಮ್ಮ, (ಸುಗಮಸಂಗೀತ ಸ್ಪರ್ಧೆಗೆ) | 1,000-00 |

## (ಇ) ನೂತನ ದತ್ತಿ ನಿಧಿಗೆ ದಾನಗಳು

| | |
|---|---|
| 1) 'ಕಣಕಟ್ಟೆ ಕೃಷ್ಣಮೂರ್ತಿರಾಯರ ಸ್ಮಾರಕದತ್ತಿ ನಿಧಿ'ಗಾಗಿ | |
| ಡಾ॥ ಕೆ. ಶ್ರೀಕಂಠಯ್ಯ, ಬೆಂಗಳೂರು | 50,000-00 |
| 2) 'ಎಂ.ಕೆ. ವಿಜಯಲಕ್ಷ್ಮಿ ಸ್ಮಾರಕ ದತ್ತಿನಿಧಿ'ಗಾಗಿ | |
| ಶ್ರೀ ಎಂ. ಕೆ. ರವಿಕಿರಣ, ಬೆಂಗಳೂರು | 15,000-00 |
| ಮತ್ತು ಈ ವರ್ಷದ ಕಾರ್ಯಕ್ರಮ ಮಾಡಲು | 1,000-00 |
| 3) 'ಪ್ರೊ॥ ರಾಮಚಂದ್ರರಾವ್ ಗಿರಿರಾವ್ ಪಟವಾರಿ ಸ್ಮಾರಕದತ್ತಿನಿಧಿ'ಗಾಗಿ | |
| ಪ್ರೊ॥ ಬಿ. ಆರ್. ಸುರಪುರ, ಗುಲ್ಬರ್ಗ | 5,000-00 |

## (ಈ) ಕಟ್ಟಡ ನಿಧಿಗೆ ದಾನ

| | |
|---|---|
| 1) ಡಾ॥ ಕೆ. ಆರ್. ಗಣೇಶ್, ಬೆಂಗಳೂರು | 5,000-00 |
| 2) ಶ್ರೀ ಜಿ. ಎಸ್. ಎಸ್. ರಾವ್, ಬೆಂಗಳೂರು | 500-00 |

# ಬಿ.ಎಂ.ಶ್ರೀ. ಮತ್ತು ಪಿ. ಕಾಳಿಂಗರಾವ್ ಸ್ಮಾರಕ ಅಖಿಲ ಕರ್ನಾಟಕ ಸುಗಮ ಸಂಗೀತ ಸ್ಪರ್ಧೆ

ತಾ||..........ರಂದು ನಡೆದ ಈ ಸ್ಪರ್ಧೆಯನ್ನು ಪ್ರೊ|| ನಾರಾಯಣಮ್ಮ ಅವರು ಬೆಳಿಗ್ಗೆ ಉದ್ಘಾಟನೆ ಮಾಡಿದರು. ನಂತರ ನಡೆದ ಸ್ಪರ್ಧೆಯಲ್ಲಿ ಸ್ಪರ್ಧಾಳುಗಳು ಭಾಗವಹಿಸಿದ್ದರು. ಈ ಕೆಳಕಂಡವರು ವಿಜೇತರಾದರು.

**ಹಿರಿಯರ ವಿಭಾಗ**

1. ರೇಖಾ ಗಂಗಾಧರ ಹೆಗಡೆ — ಪ್ರಥಮ ಬಹುಮಾನ
2. ಮಂಜುಳಾ ಅರುಣಕುಮಾರ್ — ದ್ವಿತೀಯ ಬಹುಮಾನ
3. ಮಮತ ಆರ್. — ತೃತೀಯ ಬಹುಮಾನ
4. ಅಪರ್ಣ ಆರ್. — ಸಮಾಧಾನಕರ ಬಹುಮಾನ

ಹಿರಿಯರ ವಿಭಾಗ

1. ದೀಪ್ತಿ ಭಟ್ — ಪ್ರಥಮ ಬಹುಮಾನ
2. ಮಂಜೂಳಾ ಅರುಣಕುಮಾರ್ — ದ್ವಿತೀಯ ಬಹುಮಾನ
3. ಮೂರೂರು ಚಂದ್ರ — ತೃತೀಯ ಬಹುಮಾನ

**ಕಿರಿಯರ ವಿಭಾಗ 'ಭಾವಗೀತೆ'**

1. ಮೇಘನ ಎಸ್. ಪಾಠಕ್ — ಪ್ರಥಮ ಬಹುಮಾನ
2. ಅಶ್ವಿನಿ ಸತ್ಯನಾರಾಯಣ — ದ್ವಿತೀಯ ಬಹುಮಾನ
3. ಉತ್ಥಾನ ಭಾರಿಘಾಟ್ — ತೃತೀಯ ಬಹುಮಾನ
4. ಕೆ.ಕೃತಿ — ಸಮಾಧಾನಕರ ಬಹುಮಾನ

**ಕಿರಿಯರ ವಿಭಾಗ 'ಜಾನಪದ ಗೀತೆ'**

1. ಎಂ. ಬಿ. ಆದಿತ್ಯ — ಪ್ರಥಮ ಬಹುಮಾನ
2. ಸಿದ್ಧಾರ್ಥ — ದ್ವಿತೀಯ ಬಹುಮಾನ
3. ಶ್ರೀ ಯು. ಎಸ್. ಮಯ್ಯ — ತೃತೀಯ ಬಹುಮಾನ
4. ಮೇಘಾ ಜಿ. ಹೆಗಡೆ — ಸಮಾಧಾನಕರ ಬಹುಮಾನ

ಸಂಜೆ ನಡೆದ ಬಹುಮಾನ ವಿತರಣೆ ಕಾರ್ಯಕ್ರಮದಲ್ಲಿ ಪ್ರಸಿದ್ಧ ಕವಿಗಳಾದ ಡಾ|| ಎನ್. ಎಸ್. ಲಕ್ಷ್ಮೀನಾರಾಯಣಭಟ್ ಅವರು ಬಹುಮಾನ ವಿತರಣೆ ಮಾಡಿದರು. ಮುಖ್ಯ ಅತಿಥಿಗಳಾಗಿ ಪ್ರಸಿದ್ಧ ಗಾಯಕರಾದ ಶ್ರೀ ಶಿವಮೊಗ್ಗ ಸುಬ್ಬಣ್ಣ, ಜಾನಪದ ವಿದ್ವಾಂಸರಾದ ಪ್ರೊ|| ಡಿ. ಲಿಂಗಯ್ಯನವರು ಅಧ್ಯಕ್ಷತೆ ವಹಿಸಿದ್ದರು. ಪ್ರೊ|| ಗೀತಾಚಾರ್ಯ ಸ್ವಾಗತ ಮಾಡಿದರು, ಶ್ರೀಮತಿ ಜಯಪಾರ್ಥಸಾರಥಿ ನಿರೂಪಣೆ ಮಾಡಿದರು.

ತೀರ್ಪುಗಾರರಾಗಿ ಶ್ರೀ ಕೆ. ಶ್ರೀನಿವಾಸಮೂರ್ತಿ, ಶ್ರೀಮತಿ ಗಿರಿಜಾ ನಾರಾಯಣ, ಶ್ರೀಮತಿ ರಮಾ ಅರವಿಂದ್ ಮತ್ತು ಅರುಣ ಚಂದ್ರಶೇಖರ್ ಅವರು ಭಾಗವಹಿಸಿದ್ದರು.

# (೧) ಪ್ರತಿಷ್ಠಾನದ ಕಾರ್ಯಕ್ರಮಗಳ ಬಗ್ಗೆ ಪತ್ರಿಕಾ ವರದಿಗಳು

## (ಅ) 'ಸಿರಿ ಸಂಗೀತ' - ವಿಶಿಷ್ಟ ಸಂಗೀತ ಕಾರ್ಯಕ್ರಮ ಶಾಲೆ

ಇತ್ತೀಚೆಗೆ ರಜತೋತ್ಸವವನ್ನು ಆಚರಿಸಿದ ನಗರದ ಪ್ರತಿಷ್ಠಿತ ಸಾಹಿತ್ಯ ಸಂಸ್ಥೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ರಜತೋತ್ಸವದ ನೆನಪಿಗಾಗಿ ವಿಶೇಷ ಕಾರ್ಯಕ್ರಮ 'ಸಿರಿಸಂಗೀತ ಮಾಲೆ'ಯನ್ನು ಈ ತಿಂಗಳಿನಿಂದ ಆರಂಭಿಸಿದೆ. ಸಂಶೋಧನ ಸಾಹಿತ್ಯ ಮತ್ತು ಸೃಜನಶೀಲ ಸಾಹಿತ್ಯಗಳಲ್ಲಿ ಹಲವು ಮೌಲಿಕ ಚಟುವಟಿಕೆಗಳನ್ನು ನಡೆಸುತ್ತಿರುವ ಬಿ.ಎಂ.ಶ್ರೀ. ಪ್ರತಿಷ್ಠಾನ ಸಾಹಿತ್ಯ ಪರಿಚಯ ಮತ್ತು ಪ್ರಚಾರಕ್ಕಾಗಿ ಜನಪ್ರಿಯವಾಗುತ್ತಿರುವ ಸುಗಮ ಸಂಗೀತ ಕ್ಷೇತ್ರವನ್ನು ನೂತನ ಕಾರ್ಯಕ್ರಮ ಮೂಲಕ ಯಶಸ್ವಿಯಾಗಿ ಬಳಸಿಕೊಳ್ಳಲು ಹೆಜ್ಜೆ ಇಟ್ಟಿದೆ.

ಬಿ.ಎಂ.ಶ್ರೀ. ಕಲಾಭವನದ ಎಂ.ವಿ.ಸೀ. ಸಭಾಂಗಣದಲ್ಲಿ ಮೊನ್ನೆ ನಡೆದ ಈ 'ಸಿರಿಸಂಗೀತ' ಪ್ರತಿ ತಿಂಗಳ ಸಂಗೀತ ಕಾರ್ಯಕ್ರಮ ಮಾಲೆಯ ಉದ್ಘಾಟನಾ ಸಮಾರಂಭದಲ್ಲಿ ಈ ನೂತನ ಕಾರ್ಯಕ್ರಮ ಸಂಯೋಜಕರೂ ಸಂಸ್ಥೆಯ ಗೌ|| ಕಾರ್ಯದರ್ಶಿಗಳೂ ಆದ ಸಾಹಿತಿ ಪ್ರೊ|| ನಾ. ಗೀತಾಚಾರ್ಯ ಅವರು ಪ್ರಾಸ್ತಾವಿಕ ಮಾತುಗಳನಾಡುತ್ತ. ಇದರಲ್ಲಿ ಹೊಸ ಕಲಾವಿದರನ್ನು ಪ್ರೋತ್ಸಾಹಿಸುವ ಮತ್ತು ಹೊಸ ಹೊಸ ಸಾಹಿತ್ಯವನ್ನು ಸಂಗೀತ ಕ್ಷೇತ್ರಕ್ಕೆ ಪರಿಚಯಿಸುವ ವಿನೂತನ ಪ್ರಯೋಗ ಎಂದರು. ಸುಗಮ ಸಂಗೀತ, ವಚನ ಸಂಗೀತ, ಹರಿದಾಸರ ಹಾಡುಗಳು, ಜಾನಪದ ಗೀತೆಗಳು, ತತ್ವಪದಗಳು ಮತ್ತು ಗಮಕ ಸಂಗೀತಗಳನ್ನು ತಿಂಗಳಿಗೊಂದರಂತೆ ಪ್ರಸ್ತುತಪಡಿಸಲಾಗುವುದು. ಪ್ರತಿ ತಿಂಗಳೂ ಹೊಸ ಗಾಯಕರಿಗೆ ಹೊಸ ಹಾಡುಗಳನ್ನು ಈ 'ನವನವೀನ' ಕಾರ್ಯಕ್ರಮದಿಂದ ಜನಪ್ರಿಯವಾಗುತ್ತಿರುವ ಸಂಗೀತ ಮಾಧ್ಯಮದಿಂದಲೂ ಸಾಹಿತ್ಯವನ್ನು ಸಾಮಾನ್ಯ ಜನತೆಗೆ ತಲುಪಿಸುವುದು ಮತ್ತು ಸಂಗೀತ ಮಧ್ಯಮವನ್ನು ವೈವಿಧ್ಯಗೊಳಿಸುವುದು ಇದರ ಉದ್ದೇಶವೆಂದರು. ಅತ್ತಿಮಬ್ಬೆ ಪ್ರತಿಷ್ಠಾನದ ಸಹಯೋಗದಲ್ಲಿ ನಡೆಸಿಕೊಂಡು ಹೋಗಲಾಗುವುದು. ಎಂದೂ ಹೇಳಿದರು.

ಅತ್ತಿಮಬ್ಬೆ ಪ್ರತಿಷ್ಠಾನ ಸಂಸ್ಥಾಪಕ ನಿರ್ದೇಶಕಿ ಮನೋಹರಿ ಪಾರ್ಥಸಾರಥಿ ಅವರು ಸ್ವಾಗತ ಕೋರಿದರು. 'ಸಿರಿ ಸಂಗೀತ' ವನ್ನು ಉದ್ಘಾಟನೆ ಮಾಡಿದ ಖ್ಯಾತ ಸಾಹಿತಿ ಡಾ|| ಸಾ. ಶಿ. ಮರುಳಯ್ಯ ಅವರು ಇದೊಂದು ಅತ್ಯಂತ ಉಪಯುಕ್ತ ಕಾರ್ಯಕ್ರಮ ಮಾಲೆ ಎಂದು ಶ್ಲಾಘಿಸಿದರು. ಸಾಹಿತ್ಯವನ್ನು ಸಂಗೀತದ ಮಧ್ಯಮದ ಮೂಲಕ ಪರಿಚಯಿಸುವ ಈ ಕಾರ್ಯಕ್ರಮ ವೈವಿಧ್ಯತೆಯಿಂದ ಕೂಡಿರುವುದು, ಹೊಸ ಪ್ರತಿಭೆಗಳನ್ನು ಪ್ರೋತ್ಸಾಹಿಸಿರುವುದು, ಅಭಿನಂದನೀಯವೆನ್ನುತ್ತ, ಈ ವಿನೂತನ ಕಾರ್ಯಕ್ರಮದ ನನಸುಗಾರ ಸಾಹಿತಿ ಮತ್ತು ಗೀತಾಚಾರ್ಯರು ಬಿ.ಎಂ.ಶ್ರೀ. ಪ್ರತಿಷ್ಠಾನದ ಮೂಲಕ ಇಂತಹ ಅನೇಕ ವಿಶೇಷ ಚಟುವಟಿಕೆಗಳನ್ನು ನಡೆಸುತ್ತಾ, ಪ್ರತಿಷ್ಠಾನವನ್ನು ಕ್ರಿಯಾಶೀಲವಾಗಿಸಿರುವುದು ಸರ್ವವಾಗಿ ಶ್ರೇಯವಾಗಿದೆ ಎಂದರು.

ಹೊಸಗನ್ನಡ ಸಾಹಿತ್ಯದ ಯುಗಪುರುಷ ಬಿ.ಎಂ.ಶ್ರೀ.ಯವರ ಹೆಸರಿನ ಕನ್ನಡ ರೂಪ 'ಸಿರಿ'ಯನ್ನು ಸಂಗೀತ ಸಿರಿ ಎಂಬ ಅರ್ಥದಲ್ಲೂ ಜೋಡಿಸಿ, 'ಸಿರಿಸಂಗೀತ' ಎಂದು ಈ ಕಾರ್ಯಕ್ರಮ ಮಾಲೆಗೆ ಹೆಸರಿಸುವುದು ಅತ್ಯಂತ ಉಚಿತವಾಗಿದೆ. ಕನ್ನಡ ಸಾಹಿತ್ಯ ವಚನ,

ಕೀರ್ತನೆ, ಜನಪದ, ಭಾವಗೀತೆ, ಕಾವ್ಯ ಹೀಗೆ ವೈವಿಧ್ಯಮಯವಾಗಿದ್ದು ಆ ಎಲ್ಲ ವೈವಿಧ್ಯತೆಯನ್ನು ಸಂಗೀತ ಸಿರಿಯಲ್ಲಿ ಸೆರೆಹಿಡಿಯುವ ಈ ಯೋಜನೆಯೇ ವಿಶಿಷ್ಟ, ವಿನೂತನವಾಗಿದೆ. ಇದು ನಿರಂತರವಾಗಿ ಮುಂದುವರಿಯಲಿ. ಅಭಿನವ ಅತ್ತಿಮಬ್ಬೆಯಾಗಿರುವ, ಕೊಡುಗೈದಾನಿ ಮನೋಹರಿ ಪಾರ್ಥಸಾರಥಿ ಅವರ ಅತ್ತಿಮಬ್ಬೆ ಪ್ರತಿಷ್ಠಾನದ ಸಹಯೋಗದಲ್ಲಿ ಈ 'ಸಿರಿಸಂಗೀತ' ಯಶಸ್ವಿಯಾಗುವುದರಲ್ಲಿ ಸಂದೇಹವಿಲ್ಲವೆಂದರು. ಸಾಹಿತ್ಯ - ಸಂಗೀತದ ಸಾಮರಸ್ಯ, ಸೌಂದರ್ಯವನ್ನು ಎಳೆ ಎಳೆಯಾಗಿ ಬಿಡಿಸಿ ಸಭೆಯನ್ನು ರಂಜಿಸಿದರು.

ಮುಖ್ಯ ಅತಿಥಿಗಳಾಗಿ ಖ್ಯಾತ ವಿದುಷಿ ಶ್ಯಾಮಲ ಜಿ. ಭಾವೆ ಮತ್ತು ಖ್ಯಾತ ಲೇಖಕಿ ಬಿ. ಟಿ. ಲಲಿತಾ ನಾಯಕ್ ಅವರೂ ಈ ವಿನೂತನ ಕಾರ್ಯಕ್ರಮವನ್ನು ಶ್ಲಾಘಿಸಿದರು. ಇದೇ ಸಂದರ್ಭದಲ್ಲಿ ಪ್ರಸಿದ್ಧ ಸಂಗೀತ ವಿದ್ವಾಂಸರಾದ ಎ. ಸುಬ್ಬರಾವ್ ಅವರನ್ನು ಅತ್ತಿಮಬ್ಬೆ ಪ್ರತಿಷ್ಠಾನ ಸನ್ಮಾನಿಸಿತು.

ಸಿರಿಗಂಗೀತದ ಪ್ರಥಮ ಕಾರ್ಯಕ್ರಮವಾಗಿ ಜಯಾ ಪಾರ್ಥಸಾರಥಿ ಮತ್ತು ಪ್ರತಿಷ್ಠಾನದ ಸುಗಮ ಸಂಗೀತ ತರಗತಿಯ ವಿದ್ಯಾರ್ಥಿಗಳು ಸುಗಮ ಸಂಗೀತವನ್ನು ನಡೆಸಿಕೊಟ್ಟರು.

ಕೃಪೆ ವಿಜಯ ಕರ್ನಾಟಕ 27-1-05

## (ಆ) ಪು.ತಿ.ನ. ಶ್ರೀ ಹರಿಚರಿತೆ : ಅಗ್ರಗಣ್ಯ ಕೃತಿ

ಮಹಾಕಾವ್ಯಗಳ ಕಾಲ ಮುಗಿದು ಹೋಯಿತು ಎಂದು ಪಾಶ್ಚಾತ್ಯ ಸಾಹಿತ್ಯಲೋಕ ಘೋಷಿಸಿದ್ದ ಕಾಲದಲ್ಲೇ ಭಾರತದಲ್ಲಿ ಮಹಾಕಾವ್ಯಗಳ ಯುಗ ಸಂಪದ್ಭರಿತವಾಗಿತ್ತು. ಅದರಲ್ಲೂ ಕನ್ನಡದಲ್ಲಿ ನಿರಂತರ ರಚನೆಯಲ್ಲಿ ತೊಡಗಿತ್ತು. ಕುವೆಂಪು, ಮಾಸ್ತಿ, ಪು.ತಿ.ನ. ರಂಥ ಶ್ರೇಷ್ಠ ಕವಿಗಳು ಮಹಾಕಾವ್ಯ ರಚನೆಯಲ್ಲಿ ತೊಡಗಿದ್ದರು. ಮತ್ತು ಶ್ರೇಷ್ಠ ಮಹಾಕಾವ್ಯಗಳನ್ನು ಕೊಟ್ಟು ಕನ್ನಡ ಸಾಹಿತ್ಯವನ್ನು ಜಾಗತಿಕ ಮಟ್ಟಕ್ಕೆ ಬೆಳೆಸಿದರು ಎಂದು ಖ್ಯಾತ ಕವಿ ವಿಮರ್ಶಕ ಮತ್ತು ಡಾ।। ಪು.ತಿ.ನ. ಟ್ರಸ್ಟ್‌ನ ಅಧ್ಯಕ್ಷ ಡಾ।। ಜಿ. ಎಸ್. ಶಿವರುದ್ರಪ್ಪನವರು ಈಚೆಗೆ ನಡೆದ ಪು.ತಿ.ನ. ಶತಮಾನೋತ್ಸವ ವಿಚಾರಗೋಷ್ಠಿಯಲ್ಲಿ ಅಭಿಪ್ರಾಯಪಟ್ಟರು.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ಪು.ತಿ.ನ. ಟ್ರಸ್ಟ್‌ಗಳ ಸಹಯೋಗದಲ್ಲಿ ಬಿ.ಎಂ.ಶ್ರೀ. ಕಲಾಭವನದಲ್ಲಿ 'ಪು.ತಿ.ನ. ಅವರ ಶ್ರೀ ಹರಿಚರಿತೆ - ಒಂದು ಸಮೀಕ್ಷೆ' - ವಿಚಾರಗೋಷ್ಠಿಯನ್ನು ಉದ್ಘಾಟನೆ ಮಾಡುತ್ತ ಡಾ।। ಜಿ. ಎಸ್. ಶಿವರುದ್ರಪ್ಪ ಅವರು ಕನ್ನಡದಲ್ಲಿ ಆಧುನಿಕ ಮಹಾಕಾವ್ಯ ಪರಂಪರೆ ಈಗಲೂ ಜೀವಂತವಾಗಿದೆ. ಎಂದು ಹೇಳುತ್ತಾ ಅವುಗಳಲ್ಲಿ ಪು.ತಿ.ನ. ಅವರ ಶ್ರೀ ಹರಿಚರಿತೆ ಆಧುನಿಕ ಮಹಾಕಾವ್ಯ ಗಳಲ್ಲಿ ಒಂದು ಅಗ್ರಗಣ್ಯ ಕೃತಿ ಎಂದು ಗುರುತಿಸಿದರು.

ನಂತರ ನಡೆದ ವಿಚಾರಗೋಷ್ಠಿಯಲ್ಲಿ 'ಆಧುನಿಕ ಮಹಾಕಾವ್ಯಗಳ ಹಿನ್ನೆಲೆಯಲ್ಲಿ ಶ್ರೀ ಹರಿಚರಿತೆ ಕುರಿತು ಮೈಸೂರಿನ ಪ್ರಸಿದ್ಧ ಕವಿ ಸಾಹಿತಿ ಡಾ।। ಸಿ. ಪಿ. ಕೃಷ್ಣಮೂರ್ತಿ (ಸಿಪಿಕೆ),

ಕೃಷ್ಣ ಕಥಾ ಪರಂಪರೆ ಮತ್ತು ಶ್ರೀ ಹರಿಚರಿತೆ ಕುರಿತು ವಿಮರ್ಶಕಿ ಮತ್ತು ಕನ್ನಡ ಪ್ರಾಧ್ಯಾಪಕಿ ಡಾ|| ಎಸ್. ವಿ. ಪ್ರಭಾವತಿ : 'ಗೋಕುಲ ನಿರ್ಗಮನ ಮತ್ತು ಶ್ರೀ ಹರಿ ಚರಿತೆ' ಕುರಿತು ಪ್ರಸಿದ್ಧ ಕವಿ ಲೇಖಕಿ ಡಾ|| ವಿಜಯಸುಬ್ಬರಾಜ್ ಅವರುಗಳು ಪ್ರಬಂಧಗಳನ್ನು ಮಂಡಿಸಿ ಪು.ತಿ.ನ. ಅವರ ಶ್ರೀಹರಿಚರಿತೆಯ ಮೇಲೆ ವಿವಿಧ ನೆಲೆಗಳಿಂದ ಬೆಳಕು ಚೆಲ್ಲಿದರು.

ಇಡೀ ದಿನ ನಡೆದ ಈ ವಿಚಾರಗೋಷ್ಠಿಯಲ್ಲಿ ಮೊದಲಗೋಷ್ಠಿಯ ಅಧ್ಯಕ್ಷತೆಯನ್ನು ಖ್ಯಾತ ಸಂಶೋಧಕರೂ ಬಿ.ಎಂ.ಶ್ರೀ. ಪ್ರತಿಷ್ಠಾನದ ಅಧ್ಯಕ್ಷರೂ ಆದ ಡಾ|| ಟಿ. ವಿ. ವೆಂಕಟಾಚಲಶಾಸ್ತ್ರೀ ಅವರೂ, ಎರಡನೇ ಗೋಷ್ಠಿಯ ಅಧ್ಯಕ್ಷತೆಯನ್ನು ಪ್ರಸಿದ್ಧ ಸಾಹಿತಿಗಳಾದ ಪ್ರೊ|| ಅ. ರಾ. ಮಿತ್ರ ಅವರು ವಹಿಸಿ ಪು.ತಿ.ನ. ಅವರ ಶ್ರೀಹರಿಚರಿತೆಯನ್ನು ಮತ್ತು ಆ ಮೂಲಕ ಅವರ ಕಾವ್ಯಶಕ್ತಿಯನ್ನು ಸಮರ್ಥವಾಗಿ ಬಿಡಿಸಿಕೊಟ್ಟರು.

ಆರಂಭದಲ್ಲಿ ಬಿ.ಎಂ.ಶ್ರೀ. ಪ್ರತಿಷ್ಠಾನದ ಕೋಶಾಧಿಕಾರಿ ಮತ್ತು ಪ್ರಸಿದ್ಧ ಜಾನಪದ ತಜ್ಞ ಪ್ರೊ|| ಡಿ. ಲಿಂಗಯ್ಯ ಸ್ವಾಗತ ಕೋರಿದರು. ಪು.ತಿ.ನ. ಟ್ರಸ್ಟಿನ ಕಾರ್ಯದರ್ಶಿಗಳಾದ ಶ್ರೀ ಕೆ. ಎಸ್. ಅಚ್ಯುತನ್ ಅವರು ಪ್ರಾಸ್ತಾವಿಕ ಮಾತುಗಳನ್ನಾಡಿದರು. ಬಿ.ಎಂ.ಶ್ರೀ. ಪ್ರತಿಷ್ಠಾನದ ಗೌ|| ಕಾರ್ಯದರ್ಶಿ ಮತ್ತು ಕನ್ನಡ ಪ್ರಾಧ್ಯಾಪಕ ಪ್ರೊ|| ನಾ. ಗೀತಾಚಾರ್ಯ ಅವರು ನಿರ್ವಹಣೆ ಮಾಡುತ್ತಾ ಬಿ.ಎಂ.ಶ್ರೀ. ಪ್ರತಿಷ್ಠಾನದ ಜೊತೆಗಿನ ಅವರ ಸಂಬಂಧವನ್ನು ನೆನಪಿಸಿದರು.

ಗೋಷ್ಠಿಗಳ ಕೊನೆಯಲ್ಲಿ ಖ್ಯಾತ ಗಮಕಿಗಳಾದ ಗಂಗಮ್ಮ ಕೇಶವಮೂರ್ತಿ ಅವರು ಪು.ತಿ.ನ. ಅವರ ಶ್ರೀಹರಿಚರಿತೆಯಿಂದ ಆಯ್ದಭಾಗದ ಗಮಕ ವಾಚನವನ್ನು ಸುಶ್ರಾವ್ಯವಾಗಿ ಮಾಡಿದರು. ಇದು ಬಿ.ಎಂ.ಶ್ರೀ. ಪ್ರತಿಷ್ಠಾನ ಪ್ರತಿತಿಂಗಳು ನಡೆಸುವ 'ಸಿರಿಸಂಗೀತ'ದ ಎರಡನೇ ಸಂಗೀತ ಕಾರ್ಯಕ್ರಮವಾಗಿತ್ತು.

ಕೃಪೆ : ಸಂಯುಕ್ತ ಕರ್ನಾಟಕ (23-2-05)

---

## (೯) ಪಿ. ಎಚ್. ಡಿ. ಶಿಕ್ಷಣಾರ್ಥಿಗಳ ಕಮ್ಮಟ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಸ್ನಾತಕೋತ್ತರ ಸಂಶೋಧನಾ ಕೇಂದ್ರದಲ್ಲಿ ಪಿಎಚ್‌ಡಿ ಅಧ್ಯಯನ ಕೈಗೊಂಡಿರುವ ವಿದ್ಯಾರ್ಥಿಗಳಿಗಾಗಿ ಈಚೆಗೆ ಮೂರು ದಿನಗಳ ಸಂಶೋಧನಾ ಕಮ್ಮಟವನ್ನು ಯಶಸ್ವಿಯಾಗಿ ನಡೆಸಲಾಯಿತು.

ಮೊದಲ ದಿನ ಕಮ್ಮಟವನ್ನು ಉದ್ಘಾಟನೆ ಮಾಡಿದ ಖ್ಯಾತ ಸಂಶೋಧಕ ಡಾ|| ಎಸ್. ನಾಗರಾಜ್ ಅವರು, ಸಂಶೋಧನೆಯ ಅಗತ್ಯ, ಮಹತ್ವ ಮತ್ತು ಸಂಶೋಧಕನ ಕರ್ತವ್ಯಗಳನ್ನು ಕುರಿತು ಬೋಧಪ್ರದವಾಗಿ ತಿಳಿಸಿದರು. ನಂತರ ಖ್ಯಾತ ಭಾಷಾತಜ್ಞರಾದ ಡಾ|| ಕೆ. ಕೃಷ್ಣಭಟ್ ಅವರು ಸಂಶೋಧನೆಯ ವಿಧಿವಿಧಾನಗಳನ್ನು ಕುರಿತು ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕ ಹಾಗೂ ಪುಸ್ತಕ ಪ್ರಾಧಿಕಾರದ ಮಾಜಿ ಅಧ್ಯಕ್ಷ ಪ್ರೊ|| ಮಲ್ಲೇಪುರಂ ಜಿ. ವೆಂಕಟೇಶ್ ಅವರು ಸಂಶೋಧನೆಯ ಇತ್ತೀಚಿನ ಒಲವುಗಳನ್ನು ಕುರಿತು ವಿಶೇಷ ಉಪನ್ಯಾಸಗಳನ್ನು ನೀಡಿದರು.

ಎರಡನೇ ದಿನ ವಿದ್ಯಾರ್ಥಿಗಳ ಸಂಶೋಧನಾ ವಿಷಯಗಳನ್ನು ಕುರಿತ ಟಿಪ್ಪಣಿ ಮಂಡನೆಯ ಗೋಷ್ಠಿ ನಡೆಯಿತು. ಪ್ರತಿಷ್ಠಾನದ ಅಧ್ಯಕ್ಷರೂ ಖ್ಯಾತ ಸಂಶೋಧಕರೂ ಆದ ಡಾ|| ಟಿ. ವಿ. ವೆಂಕಟಾಚಲಶಾಸ್ತ್ರೀಗಳು ಸಂಶೋಧನೆಯ ಶ್ರೇಷ್ಠ ಮಾದರಿಗಳ ಉದಾಹರಣೆಯೊಂದಿಗೆ ಚಾಲನೆ ನೀಡಿದರು.

ಪ್ರತಿಷ್ಠಾನದಲ್ಲಿ ಪಿಎಚ್‌ಡಿ ಅಧ್ಯಯನಕ್ಕೆ ಮಾರ್ಗದರ್ಶನ ಮಾಡುತ್ತಿರುವ ವಿದ್ವಾಂಸರುಗಳಾದ ಎನ್. ಬಸವಾರಾಧ್ಯ, ಡಾ|| ಪಿ. ವಿ. ನಾರಾಯಣ, ಡಾ|| ಎಸ್. ನಾಗರಾಜ್, ಡಾ|| ಅನಂತಪದ್ಮನಾಭರಾವ್, ಪ್ರೊ|| ಡಿ. ಲಿಂಗಯ್ಯ, ಡಾ|| ಎಂ. ಎಲ್. ಲಲಿತಮ್ಮ ಅವರುಗಳು ಈ ಕಮ್ಮಟದಲ್ಲಿ ಉಪಸ್ಥಿತರಿದ್ದು ಸೂಕ್ತ ಸಲಹೆಗಳನ್ನು ನೀಡಿದರು. ಕನ್ನಡ ವಿಶ್ವವಿದ್ಯಾನಿಲಯದ ಪ್ರೊ|| ಮಲ್ಲೇಪುರಂ ಜಿ. ವೆಂಕಟೇಶ ಅವರ ಮಾರ್ಗದರ್ಶದಲ್ಲಿ ಬಿ.ಎಂ.ಶ್ರೀ. ಪ್ರತಿಷ್ಠಾನದ ಸಂಶೋಧನ ಕೇಂದ್ರದ ಸಂಚಾಲಕರಾದ ಪ್ರೊ|| ನಾ|| ಗೀತಾಚಾರ್ಯರ ನಿರ್ದೇಶನದಲ್ಲಿ ಈ ಕಮ್ಮಟವನ್ನು ಏರ್ಪಡಿಸಲಾಗಿತ್ತು.

ಕೃಪೆ : ಸಂಯುಕ್ತ ಕರ್ನಾಟಕ

---

## ಗುಲಬರ್ಗದ ಕನ್ನಡ ಸಾಹಿತ್ಯ ಸಂಗಮದಲ್ಲಿ ಹಸ್ತಪ್ರತಿ ಪ್ರದರ್ಶನ

ಹಸ್ತಪ್ರತಿಗಳು ನಮ್ಮ ಪರಂಪರೆಯ ಅಮೂಲ್ಯವಾದ ಸಂಪತ್ತು. ಈ ಸಂಪತ್ತನ್ನು ಮುಂದಿನ ಪೀಳಿಗೆಗೆ ಕೊಡುಗೆಯಾಗಿ ನೀಡುವ ದಿಸೆಯಲ್ಲಿ ಬಿ.ಎಂ.ಶ್ರೀ. ಪ್ರತಿಷ್ಠಾನ ನಿರತವಾಗಿದೆ ಎಂದು ಡಾ|| ಎಂ. ಚಿದಾನಂದಮೂರ್ತಿ ಪ್ರಶಂಸಿದರು. ಅವರು ಇಂದು ಇಲ್ಲಿ ಕನ್ನಡ ಸಾಹಿತ್ಯ ಸಂಘ ಮತ್ತು ಪ್ರತಿಷ್ಠಾನ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಯಮುನಾಬಾಯಿ ಹನುಮಂತರಾವ್ ಧಾರವಾಡಕರ ಸ್ಮಾರಕ ದತ್ತಿ ಉಪನ್ಯಾಸದಲ್ಲಿ ಭಾಗವಹಿಸಿ ಹರಿದಾಸ ಸಾಹಿತ್ಯದ ಮೂರುದಾರಿಗಳು ಎನ್ನುವ ವಿಷಯದ ಮೇಲೆ ಪ್ರಾಚೀನ ಓಲೆಗರಿಗಳ ಹಸ್ತಪ್ರತಿಗಳ ಸಂಗ್ರಹಣೆ, ಅಧ್ಯಯನದ ಬಗ್ಗೆ ಸಮಾಜದಲ್ಲಿ ಪ್ರಜ್ಞೆಯನ್ನು ಮೂಡಿಸುವಲ್ಲಿ ಈ ಪ್ರತಿಷ್ಠಾನದ ಕಾರ್ಯ ಅತ್ಯಂತ ಸ್ಮರಣೀಯವಾದದ್ದು ಎಂದರು.

ಪ್ರೊ|| ಗೀತಾಚಾರ್ಯ ಅವರು ಉಪನ್ಯಾಸ ನೀಡಿದರು. ಮರುದಿನ ಕನ್ನಡ ಸಾಹಿತ್ಯ ಸಂಘ ಆಯೋಜಿಸಿದ್ದ ಈ ಕಾರ್ಯಕ್ರಮದಲ್ಲಿ ನಾಡಿನ ಖ್ಯಾತ ಸಂಶೋಧಕರಾದ ಚಿದಾನಂದಮೂರ್ತಿ, ಅವರು 'ಭಾಷಿಕ ಬೃಹತ್ ಕರ್ನಾಟಕ' ಮತ್ತು 'ಭೌಗೋಳಿಕ ಬೃಹತ್ ಕರ್ನಾಟಕ' ವಿಷಯಗಳ ಬಗ್ಗೆ ಎರಡು ದತ್ತಿ ಉಪನ್ಯಾಸಗಳನ್ನೂ ಪ್ರೊ|| ಡಿ. ಲಿಂಗಯ್ಯ ಅವರು 'ಕನ್ನಡ ಜಾನಪದ ಸಾಹಿತ್ಯ' ಕುರಿತು ದತ್ತಿ ಉಪನ್ಯಾಸವನ್ನೂ ನೀಡಿದರು. ಸಾಹಿತಿ ವಸಂತ ಕುಷ್ಟಗಿ, ವಿ. ಸಿ.ದೇವುಳಗಾಂವಕರ ಉಪಸ್ಥಿತರಿದ್ದರು. ಸಾಹಿತ್ಯ ಸಂಘದ ಅಧ್ಯಕ್ಷರಾದ ವಾಮದೇವ ದೀಕ್ಷಿತ ಪುತ್ರರಾದ ಕೈಲಾಸ ದೀಕ್ಷಿತ ಮತ್ತು ಇತರ ಸದಸ್ಯರು ಸಮಾರಂಭವನ್ನು ಯಶಸ್ವಿಗೊಳಿಸಿದರು.

### 'ವಸ್ತು ನಿಷ್ಠತೆ ಗರ್ಗೇಶ್ವರಿ ವೈಶಿಷ್ಟ್ಯ'

ವಸ್ತು ನಿಷ್ಠತೆ ಹಾಗೂ ಪ್ರಖರ ಸಂಶೋಧನಾ ದೃಷ್ಟಿ ಹೊಂದಿದ್ದ ಪ್ರೊ|| ಗರ್ಗೇಶ್ವರಿ ವೆಂಕಟಸುಬ್ಬಯ್ಯ ಅವರು ಸಂಶೋಧನಾ ಸಾಹಿತ್ಯಕ್ಕೆ ಹೊಸ ರೂಪ ನೀಡಿದ್ದರು ಎಂದು ಹಿರಿಯ ಸಂಶೋಧಕ ಡಾ|| ಚಿದಾನಂದಮೂರ್ತಿ ಅಭಿಪ್ರಾಯಪಟ್ಟರು.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಏರ್ಪಡಿಸಿದ್ದ, ಪ್ರೊ|| ಗರ್ಗೇಶ್ವರಿ ವೆಂಕಟಸುಬ್ಬಯ್ಯ ಸಂತಾಪಸೂಚಕ ಸಭೆಯಲ್ಲಿ ಮಾತನಾಡಿದ ಅವರು, ಗರ್ಗೇಶ್ವರಿಯವರ ಸಂಶೋಧನೆ ಹಾಗೂ ಸಾಹಿತ್ಯದಲ್ಲಿ ಸಮಕಾಲೀನ ಸಮಸ್ಯೆ ಬಿಂಬಿತವಾಗಿತ್ತು ಎಂದರು.

ಶಾಸ್ತ್ರ ಸಂಶೋಧನೆಗೆ ನೀಡಿದಷ್ಟೇ ಪ್ರಾಶಸ್ತ್ಯವನ್ನು ಸಣ್ಣ ಶಬ್ದವೊಂದರ ಹಿನ್ನೆಲೆ ಹುಡುಕಲೂ ನೀಡುತ್ತಿದ್ದರು ಎಂದರು.

ಗರ್ಗೇಶ್ವರಿಯವರ ಶಾಸ್ತ್ರ ಪ್ರೀತಿಯ ಬಗ್ಗೆ ಮಾತನಾಡಿದ ಸಂಸ್ಕೃತ ವಿದ್ವಾಂಸ ಡಾ|| ಬಿ. ಎಸ್. ರಾಮಕೃಷ್ಣರಾವ್, ಭರ್ತೃಹರಿಯ ವಾಕ್ಯಪದೀಯದಂಥ ಗ್ರಂಥನ್ನು ಕನ್ನಡೀಕರಿಸಿ ವ್ಯಾಕರಣ ಬೆಳವಣಿಗೆಗೆ ಕಾರಣರಾದರು. ಕನ್ನಡ ಮತ್ತು ಸಂಸ್ಕೃತ ಭಾಷೆಯಲ್ಲಿ ಪಾಂಡಿತ್ಯ ಸಾಧಿಸಿದ ವ್ಯಕ್ತಿಗಳಿಗೆ ಗರ್ಗೇಶ್ವರಿ ಹೆಸರಿನಲ್ಲಿ ಪ್ರಶಸ್ತಿ ನೀಡುವುದರ ಜತೆಗೆ ದತ್ತಿ ನಿಧಿ ಸ್ಥಾಪಿಸಬೇಕು ಎಂದರು. ಪ್ರೊ|| ಜಿ. ವೆಂಕಟಸುಬ್ಬಯ್ಯ, ಪ್ರೊ|| ಎಸ್. ರಾಮಚಂದ್ರಶಾಸ್ತ್ರಿ, ಪ್ರೊ|| ತಿ. ಶ್ರೀ ನಾಗಭೂಷಣ, ಡಾ|| ಟಿ. ವಿ. ವೆಂಕಟಾಚಲಶಾಸ್ತ್ರಿ ಭಾಗವಹಿಸಿದ್ದರು.

(ಕೃಪೆ : ವಿಜಯಕರ್ನಾಟಕ)

* * * *

## ತಿದ್ದುಪಡಿ

ಕರ್ನಾಟಕದ ಲೋಚನದ ಈ ಕೆಳಕಂಡ ಸಂಪುಟಗಳಲ್ಲಿ ಸಂಪುಟ ಸಂಖ್ಯೆಗಳಲ್ಲಿ ತಪ್ಪುಗಳು ಕಂಡುಬಂದಿವೆ. ಅವುಗಳನ್ನು ಈ ಕೆಳಗೆ ಕಾಣಿಸಿರುವ ಸರಿರೂಪಗಳಂತೆ ತಿದ್ದುಪಡಿ ಮಾಡಿಕೊಳ್ಳಲು ಕೋರಿದೆ.

| ಕ್ರ.ಸಂ. | ವರ್ಷ | ತಿಂಗಳು | ಸಂಪುಟ ಸಂಖ್ಯೆ | ಸಂಪುಟ ಸಂಖ್ಯೆ | ಸಂಚಿಕೆ ಸಂಖ್ಯೆ |
|---|---|---|---|---|---|
| 1) | 2001, 2002 | ಡಿಸೆ., ಜೂನ್ | 15, 16 | 14, 15 | 2, 1 |
| 2) | 2002 | ಡಿಸೆಂಬರ್ | 16 | 15 | 2 |
| 3) | 2003 | ಜನ್, ಡಿಸೆಂ. | 18, 19 | 16 | 1, 2 |
| 4) | 2004 | ಜೂನ್, ಡಿಸೆಂ. | 20 | 17 | 1, 2 |

## 'ಗ್ರಂಥಾವಲೋಕನ'

# ೧. ಶ್ರೀ ಮಹಾವೀರ ಜೀವನ ಶತಕಂ

*ಲೇಖಕ : ರವಿಕಿರಣ, ಪ್ರಕಾಶಕರು : ಶ್ರೀ ಲಲಿತಕೀರ್ತಿ ಗ್ರಂಥಮಾಲೆ, ದಾನಶಾಲೆ ಮಠ, ಕಾರ್ಕಳ-574 104. ದ್ವಿತೀಯ ಮುದ್ರಣ : 2004. ಬೆಲೆ : ಶಾಸ್ತ್ರದಾನ.*

ಕವಿ, ಕಥೆಗಾರ, ಕಲಾವಿದ ಯಂ. ಕೆ.. ರವೀಂದ್ರನಾಥ (ರವಿಕಿರಣ) ಬರೆದಿರುವ 'ಶ್ರೀ ಮಹಾವೀರ ಜೀವನ ಶತಕಂ' ಕಾವ್ಯ ದ್ವಿಪದಿ ಛಂದಸ್ಸಿನಲ್ಲಿದೆ. ಅಕ್ಷರ ಗಣಗಳನ್ನು ಬಳಸಿರುವುದು ಇದರ ವಿಶೇಷ. ಸ್ವಲ್ಪ ಹೆಚ್ಚು ಕಡಿಮೆ ಅಕ್ಷರಗಣಗಳ ವ್ಯವಸ್ಥೆಯನ್ನು ಕಾವ್ಯದುದ್ದಕ್ಕೂ ಅನುಸರಿಸಿದೆ. ಪ್ರಾರಂಭದ ಪೀಠಿಕೆ ಪದ್ಯ ಹಾಗೂ ಕೊನೆಯ ಮಂಗಳ ಪದ್ಯವನ್ನು ಹೊರತುಪಡಿಸಿ ಒಟ್ಟು ಒಂದು ನೂರು ಪದ್ಯಗಳಿವೆ. ಇದನ್ನು ಸ್ಥೂಲವಾಗಿ 'ನೀಳ್ಗವನ' ಎನ್ನಬಹುದು.

ಈ ಕಾವ್ಯದಲ್ಲಿ ವರ್ಧಮಾನಮಹಾವೀರನ ಜೀವನದ ಮುಖ್ಯ ಘಟನೆಗಳಿವೆ. ಸಾಂಪ್ರದಾಯಿಕವಾಗಿ ಕಥೆ ಪ್ರಾರಂಭವಾಗಿದೆ. ಮಹಾವೀರನ ತಾಯಿ ಪ್ರಿಯಕಾರಿಣಿ ಕಂಡ ಕನಸನ್ನು, ಮಹಾರಾಜ ಸಿದ್ಧಾರ್ಥ ಅರ್ಥೈಸುವುದು ವಿವರವಾಗಿದೆ. ಕನಸಿನಲ್ಲಿ ಹದಿನಾರು ಅಂಶಗಳು ಕಂಡಂತೆ ಹೇಳಿದೆ. ಅವು : ಆನೆ, ಗೂಳಿ, ಸಿಂಹ, ಲಕ್ಷ್ಮಿ, ಮಂದಾರಮಾಲೆ, ಪೂರ್ಣಚಂದ್ರ, ಮೀನು, ತುಂಬಿದ ಕೊಡ, ತಾವರೆ ಕೊಳ, ಸಮುದ್ರ, ರಾಜಸಿಂಹಾಸನ, ದೇವರಥ, ನಾಗಭವನ, ರತ್ನರಾಶಿ ಮತ್ತು ಅಗ್ನಿ. ಇವುಗಳಿಗೆ ಸಂಬಂಧಿಸಿದಂತೆ ಶುಭ ಸೂಚನೆಗಳನ್ನು ಮಹಾರಾಜ ತಿಳಿಸುತ್ತಾನೆ. ಜೈನ ಧಾರ್ಮಿಕ ಹಿನ್ನೆಲೆಯನ್ನು ಇವು ನೆನಪಿಸುತ್ತವೆ.

ಜನಭಕ್ತೆ ರಾಣಿ ಗರ್ಭವತಿಯಾಗುವಳು. ಮಹಾಪುರುಷನ ಜನ್ಮಕ್ಕೆ ಸಂಬಂಧಿಸಿದಂತೆ, ದೇವೇಂದ್ರ ಗರ್ಭಾವತರಣ ಕಲ್ಯಾಣ ನಡೆಸಿದನು. ದೇವ ಬಾಲಕ ಆತ್ಮ ಲೌಕಿಕ ಮಾತೃಗರ್ಭದಲ್ಲಿ ಅವತರಿಸುವುದು. ನವಮಾಸ ತುಂಬಿ, ಶುಭ ಮುಹೂರ್ತದಲ್ಲಿ ಜನನವಾಗುವುದು. ಸುರೇಶ ಮೇರುಗಿರಿಯ ಪಾಂಡುಕ ಶಿಲೆಯ ಮೇಲೆ ಮಗುವನ್ನು ಕುಳ್ಳಿರಿಸಿ, ನಿರ್ಮಲ ಕ್ಷೀರದಿಂದ, ಜನ್ಮಾಭಿಷೇಕ ಕಲ್ಯಾಣ ನೆರವೇರಿಸಿದನು. ಪುತ್ರ ಸಂತಾನವನ್ನು ಕಂಡ ತಾಯಿ ತಂದೆ, ಮುನಿಗಳಿಗೆ ಸಂತೋಷವಾಗುವುದು. ವರ್ಧಮಾನ ಎಂದು ನಾಮಕರಣವೂ ಆಯಿತು. ಮಗು-ಅಸಮ ಸಾಹಸಿಯಾಗಿ ಸುಮನೋಹರನಾಗಿ ಸುಂದರನಾಗಿ ಅಸಾಮಾನ್ಯ ಬಲಶಾಲಿಯಾಗಿ ಬೆಳೆದನಾವೀರ ಶುಕ್ಲಪಕ್ಷದ ಶಶಿಯಂತೆ. ವರ್ಣನೆಗೆ ಅಲ್ಲಲ್ಲಿ ಲಘೋಪಮೆಗಳನ್ನು ಬಳಸಿದೆ. ವರ್ಧಮಾನ ಬಾಲಕನ ವೀರ ಕಾರ್ಯಗಳ ಪರೀಕ್ಷೆಯೂ ನಡೆದವು. ಬಾಲಕ ಸರ್ಪವೊಂದನ್ನು ಮಣಿಸಿ ಮಹಾವೀರನಾದ. ರಾಜಕುಮಾರನಾದರೂ ಬಾಲಕನಿಗೆ ಆತ್ಮಜ್ಞಾನದ ಬಗೆಗೆ ಆಸಕ್ತಿ. ಅವಧಿ ಜ್ಞಾನದಿಂದ, ತನ್ನ ಪೂರ್ವಜನ್ಮವೃತ್ತಾಂತಗಳನ್ನು ತಿಳಿದುಕೊಂಡನು. ಹಿಂಸೆಯನ್ನು ಬಿಡುವುದೇ ಅನಂತ ಸುಖಕ್ಕೆ ಪಥವೆಂದು ಅರಿತನು. ಸಂಸಾರವನ್ನು ತೊರೆಯಲು ಸಂಕಲ್ಪವನ್ನು ಮಾಡಿದನು. ರಾಜ್ಯಭಾರವನ್ನು ಸ್ವೀಕರಿಸದೆ ವಿರಕ್ತನಾದನು. ಸುರೇಂದ್ರ ಬಂದು ನಿಷ್ಕ್ರಮಣ ಕಲ್ಯಾಣ ಮಾಡಿದನು.

ಮಹಾವೀರ ಕುಂದನಗರದ ವನಖಂಡದಲ್ಲಿ ಅಶೋಕ ವೃಕ್ಷದ ಬುಡದಲ್ಲಿ ವಸ್ತ್ರಾಭರಣ ತೊರೆದು ದಿಗಂಬರನಾದನು. ಕಠೋರ ತಪಸ್ಸು ಮಾಡಿದನು. ತಪಸ್ಸಿನ ಸಂದರ್ಭದಲ್ಲಿ

ಎದುರಾದ ಅಡ್ಡಿ ಆತಂಕಗಳನ್ನು ನಿವಾರಿಸಿಕೊಂಡನು. ಉಪಸರ್ಗವಿತ್ತ ಸ್ಥಾಣೆ ಎಂಬ ರುದ್ರ ವೀರಮುನಿಯ ಪಾದಕ್ಕೆರಗಿದನು. ಹನ್ನೆರಡು ವರ್ಷ ತಪಸ್ಸು ಮಾಡಿದ ವರ್ಧಮಾನ ಋಜುಕೂಲೆ ನದಿಯ ತಟದಲ್ಲಿ ಕೇವಲಜ್ಞಾನ ಪಡೆದನು.

ಕರ್ಮಗಳೆಲ್ಲ ದೂರವಾದವು ಮುನಿವರರು ಕೇವಲ ಜ್ಞಾನ ಪಡೆದರು. ಕಂಪಿಸಿತಮರೇಂದ್ರನ ಆ ಸಿಂಹಾಸನವು ಇದನ್ನು ಸೂಚಿಸಿತು. ಅಮರೇಂದ್ರ ಸುರರೊಡನೆ ಬಂದು ಕೇವಲ ಜ್ಞಾನ ಕಲ್ಯಾಣ ಮಾಡಿದನು. ಸುಸಂದರ್ಭವನ್ನು ಅರಿತ ಕುಭೇರನು ಸಮವಸರಣವನ್ನು ನಿರ್ಮಿಸಿದನು.

ಸಮವಸರಣದಲಿ ಕುಳಿತಿರ್ದರು ಆ ಮಹಾ ವೀರಸ್ವಾಮಿ ರಮ್ಯ ರತ್ನಮಯ ಸಿಂಹಾಸನದ ಮೇಲಿರ್ಪ ಅರವಿಂದದಿಂ ನಾಲ್ಕಂಗುಲ ಮೇಲೆ. ಮಹಾಪುರುಷ ಮಹಾವೀರ ಸಮವಸರಣ ಮಂಟಪದಲ್ಲಿ, ಅರ್ಧಮಾಗಧಿ ಭಾಷೆಯಲ್ಲಿ, ಗಂಭೀರವಾಣಿಯಲ್ಲಿ, ಧರ್ಮನಿರೂಪಣೆ ಮಾಡಿದನು : ಪರಿತೃಪ್ತಿಯಂ ಹೊಂದಿದರು ಸ್ವಾಮಿಯ ಉಪದೇಶದಿಂ ಸಮವಸರಣದಲಿರ್ದ ಗೃಹಸ್ಥರು ಶ್ರಾವಿಕೆಯರು ಮುನಿಗಳು ಆರ್ಯಿಕೆಯರೆಲ್ಲ. ಮಹಾವೀರ ಕೇವಲ ಜ್ಞಾನ ಪಡೆದಮೇಲೆ, ಮೂವತ್ತು ವರ್ಷ ನಿರಂತರವಾಗಿ, ಧರ್ಮಪ್ರಚಾರವನ್ನು ಮಾಡಿದನು. ಮಗಧ ಮೊದಲಾದ ದೇಶಗಳಲ್ಲಿ ಸಂಚರಿಸಿದನು. ಅನೇಕರು ಜೈನಧರ್ಮ ಸ್ವೀಕರಿಸಿದರು.

ವರ್ಧಮಾನ ಮಹಾವೀರ ಪಾವಾಪುರಿಯಲ್ಲಿ ಪಂಚಪರಮೇಷ್ಠಿಗಳ ಧ್ಯಾನದಲ್ಲಿ ನಿರತನಾದನು. ಅಘಾತಿ ಕರ್ಮದ ನಾಶಮಾಡಿದನು. ದಿವ್ಯಪ್ರಕಾಶವೊಂದು ವೀರಸ್ವಾಮಿಯ ಕಾಯದಿಂದ ಪ್ರಜ್ವಲಿಸಿ ಭವ್ಯ ಪ್ರಕಾಶವಂ ಬೀರಿದಾಗ ರವಿಯುದಯಿಸಿದಂದವು ಅಲ್ಲಿ ತೋರಿದುದು.

ಆಗ-ಜನರೆಲ್ಲ ಮಹದಾಶ್ಚರ್ಯವಂ ಪಡೆದರು ಕಂಪಿಸಿತಾಗ ಮೇದಿನಿಯು ಪವಿತ್ರ ಆತ್ಮವು ಸೇರಿತು ಮುಕ್ತಿಯಂ ಸ್ವಾಮಿಯ ಕಾಯವನು ತೊರೆದು. ಸುರೇಂದ್ರನು ಪಾವಾಪುರಿಗೆ ಬಂದು ನಿರ್ವಾಣ ಕಲ್ಯಾಣವನ್ನು ನೆರವೇರಿಸಿದನು.

ಸುರರು ವೀರಸ್ವಾಮಿ ಕಾಯದ ನಖ ಕೇಶಗಳನು ರತ್ನ ಕರಕಂಡಕಗಳಲಿ ತುಂಬಿ ಅವುಗಳನು ಚೆಲ್ಲಿದರು ಕ್ಷೀರಸಾಗರದಲಿ. ಮಹಾವೀರನ ಪರಿನಿರ್ವಾಣ ಸಂದರ್ಭಕ್ಕೆ ಕಾವ್ಯ ಮುಕ್ತಾಯವಾಗಿದೆ.

ಪ್ರಸ್ತುತ ಕಾವ್ಯವು ಶ್ರೀ ವರ್ಧಮಾನ ಮಹಾವೀರನ ಜೀವನ ವೃತ್ತಾಂತವನ್ನು ಸರಳವಾಗಿ, ಸಂಕ್ಷಿಪ್ತವಾಗಿ ನಿರೂಪಿಸುತ್ತದೆ. ವರ್ಣನೆಗೆ ಸಾಧಾರಣ ಸಾದೃಶ್ಯಗಳನ್ನು ಬಳಸಿದೆ. ದ್ವಿಪದಿಯಲ್ಲಿ ಬಹುತೇಕ ಆದಿಪ್ರಾಸವಿದೆ. ಎಲ್ಲೂ ಅತಿಯಾದ, ಅತಿರೇಕವಾದ ವಿವರಗಳಿಲ್ಲ. ಕಾವ್ಯದ ಉದ್ದಕ್ಕೂ ಕವಿಯ ಜೈನಧರ್ಮ ನಿಷ್ಠೆ, ಮಹಾವೀರ ಭಕ್ತ ನಿಚ್ಚಳವಾಗಿ ಕಂಡುಬರುತ್ತದೆ. ಈ ಕಾವ್ಯವನ್ನು ಜಿನ ಭಕ್ತ ಆವಾಹನೆಯಾದಂತೆ ಕವಿ ತನ್ಮಯವಾಗಿ ನಿರೂಪಿಸಿದ್ದಾರೆ. ಅಭಿವ್ಯಕ್ತಿ ಸರಳವಾಗಿದೆ. ಸಾಮಾನ್ಯರೂ ಸುಲಭವಾಗಿ ಓದಿ ಅರ್ಥ ಮಾಡಿಕೊಳ್ಳಬಹುದು. ಜಿನಧರ್ಮೀಯರಿಗೆ ಈ ಕಾವ್ಯ ಪಾರಾಯಣ ಪರ್ವದಂತೆ ಸ್ವೀಕಾರಾರ್ಹವಾಗಿದೆ.

ಕವಿ ರವಿಕಿರಣರ ಸದಭಿರುಚಿಯ ಸಾಹಿತ್ಯ ಕೃಷಿ ಇನ್ನೂ ಸಾರ್ಥಕವಾಗಿ ಸಾಗಲಿಯೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

ಪ್ರೊ॥ ಡಿ. ಲಿಂಗಯ್ಯ

## ೨. 'ಶ್ರೀ ರಾಮಾಯಣ ಮಹಾನ್ವೇಷಣಂ'

(ಪಂಚಮ ಸೋಪಾನ) ಲೇಖಕರು : ಶ್ರೀ ಎಂ. ವೀರಪ್ಪ ಮೊಯಿಲಿ, ಪ್ರಕಾಶಕರು : ಮಹೇಶ್ವರಿ ಪ್ರಾಕಾಶನ ನಂ. 1, ಆರ್. ಟಿ. ನಗರ, ಬೆಂಗಳೂರು-560 032. ಬೆಲೆ : ರೂ. 350/- ಪುಟಗಳು : LXXVIII+632. ಪ್ರಕಟಣೆ: ಮೇ, 2005.

ಚಾಣಾಕ್ಷ ಬುದ್ಧಿಯ ರಾಜಕಾರಣಿ ಶ್ರೀ ವೀರಪ್ಪ ಮೊಯಿಲಿಯವರು ಪ್ರತಿಭಾನ್ವಿತ ಸಾಹಿತಿಯಾಗಿ ರೂಪುಗೊಂಡು ಮಹಾಕಾವ್ಯ ರಚಿಸುವಷ್ಟು ಪ್ರತಿಭೆ, ಪ್ರೌಢಿಮೆ ಗಳಿಸಿಕೊಂಡಿರುವ ವೈಶಿಷ್ಟ್ಯಪೂರ್ಣ ಕವಿಯಾಗಿ ಬೆಳೆದಿದ್ದಾರೆ. ಇವರು ತಮ್ಮ ಅಪೂರ್ವ ಬೃಹತ್ ಕೃತಿ ಶ್ರೀ ರಾಮಾಯಣ ಮಹಾನ್ವೇಷನದಿಂದಾಗಿ ಮಹಾಕವಿ ಪದವಿಗೇರಿರುವ ಪ್ರತಿಭಾಸಂಪನ್ನರು. ರೂಪಿಸಿಕೊಂಡಿದ್ದ ಯೋಜನೆಗನುಗುಣವಾಗಿ ತಮ್ಮ 5 ಸಂಪುಟಗಳ, ಸುಮಾರು 43 ಸಾವಿರ ಸಾಲುಗಳ ಈ ಮಹತ್ಕೃತಿ, ರಾಷ್ಟ್ರಕವಿ ಡಾ|| ಕುವೆಂಪುರವರ 'ಶ್ರೀ ರಾಮಾಯಣ ದರ್ಶನಂ' ಕೃತಿಯನ್ನು ಆಕಾರದಲ್ಲೂ ಮೀರಿಸಿದೆ (ಇದರಲ್ಲಿ ಸುಮಾರು 23,000 ಸಾವಿರ ಸಾಲುಗಳಿವೆ). ವಿದ್ವತ್ ಹಾಗೂ ಸೋಪಜ್ಞತೆಯಲ್ಲಿ ಕುವೆಂಪುರವರ 'ದರ್ಶನಕ್ಕೆ' ಮೊಯಿಲಿಯವರ 'ಅನ್ವೇಷಣಂ' ಸರಿಸಾಟಿಯಾಗಿ ನಿಲ್ಲುವ ಹವಣಿಕೆಯಲ್ಲಿದೆ. ಇದು ನಿಜಕ್ಕೂ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕಂಡುಬರುತ್ತಿರುವ ಸ್ತುತ್ಯರ್ಹ, ಅಲ್ಲದೆ ಆರೋಗ್ಯಕರ ಬೆಳವಣಿಗೆಯೂ ಆಗಿದೆ. ಜೀವನದುದ್ದಕ್ಕೂ ಪ್ರಗತಿಪರ ಧೋರಣೆಯನ್ನು ಪ್ರತಿಪಾದಿಸುತ್ತಾ ಅದರ ಸಾಧನೆಗಾಗಿಯೇ ಅಹರ್ನಿಶಿ ಶ್ರಮಿಸುತ್ತಿರುವ ಶ್ರೀ ಮೊಯಿಲಿಯವರು ಈ ಮಹಾ ಕಾವ್ಯದುದ್ದಕ್ಕೂ ಇದೇ ಧೋರಣೆಯನ್ನು ರಾಮತ್ವದಲ್ಲಿ ಪಡಿಮೂಡಿಸಲು ಶಕ್ತರಾಗಿದ್ದಾರೆ. ರಾಮತ್ವ, ರಾವಣತ್ವ ಎರಡು ವಿಭಿನ್ನ ಅಭಿರುಚಿ, ನಿಲುವು ತಿಳಿವು, ನೀತಿ-ಅನೀತಿ ಧೋರಣೆಗಳು. ಇವನ್ನೂ ಸಮರ್ಥ ರೀತಿಯಲ್ಲಿ ಕೃತಿಯಲ್ಲಿ ಪ್ರತಿಮಿಸುವಲ್ಲಿ ಶ್ರೀ ಮೊಯಿಲಿಯವರು ಯಶಸ್ವಿಯಾಗಿದ್ದಾರೆ.

ಇವರ ಕಲ್ಪನೆ, ವಿಚಾರ ಧಾರೆ, ನಿರೂಪಣಾ ಸಾಮರ್ಥ್ಯ, ಶಬ್ದ ಸೌಂದರ್ಯ, ವರ್ಣನಾ ವೈಖರಿ ಸೋಪಾನ ಸೋಪಾನಕ್ಕೂ ಪ್ರಬುದ್ಧತೆಯತ್ತ ಹೆಜ್ಜೆ ಹಾಕಿರುವುದು ಈ ಸಮಗ್ರ ಕಾವ್ಯವನ್ನು ಅವಲೋಕಿಸಿದವರೆಲ್ಲರಿಗೂ ಅರಿವಾಗಿರುತ್ತದೆ. ಈ ಬೃಹತ್ ಕಾವ್ಯದಲ್ಲಿ ಮಹಾಕಾವ್ಯದ ಅಪೇಕ್ಷಿತ ಘಟಕಗಳಾದ ಅಷ್ಟಾದಶ ವರ್ಣನೆಗಳು ಸಂಪನ್ನವಾಗಿ ಪಲ್ಲವಿಸಿವೆ. ಮಹಾಕಾವ್ಯಗಳಲ್ಲಿ ಕಂಡುಬರುವ ಓಜಸ್ಸು, ತೇಜಸ್ಸು, ವಿದ್ವತ್ತು ಮೊಯಿಲಿಯವರ ಈ ಕಾವ್ಯದಲ್ಲಿ ವಿಪುಲವಾಗಿ ಕಂಡುಬರುತ್ತವೆ. ಸಾಂಸ್ಕೃತಿಕ ಹಾಗೂ ಸಾಮಾಜಿಕ ಸಂಘರ್ಷವೇ ಈ ಕಾವ್ಯದ ಧ್ವನಿಯಾಗಿ, ಸಂಕೇತಸಂಸ್ಕೃತಿ, ಕಿಷ್ಕಿಂದಾ ಸಂಸ್ಕೃತಿ, ಲಂಕಾ ಸಂಸ್ಕೃತಿಗಳ ಮಧ್ಯದ ವೈದೃಶ್ಯ, ಇತಿ-ಮಿತಿಗಳು, ಗುಣ-ದೋಷಗಳು, ಸ್ವರೂಪ-ಸಾದೃಶ್ಯಗಳು ಈ ಮಹಾಕಾವ್ಯದಲ್ಲಿ ಸಾಕಾರ ತಳೆಯುತ್ತವೆ.

"ರಚಿಸುವೆನು ಸಲೆ ಲಕ್ಷಣ ಮಹಾ ಕಾವ್ಯವನು" ಎಂದು ಕವಿ ಮೊಯಿಲಿಯವರು ಮೊದಲ ಸೋಪಾನದಲ್ಲೇ ಹೇಳಿರುವಂತೆ ಇವನಿಗೆ ಎಲ್ಲಾ ಸೋಪಾನಗಳಲ್ಲೂ ಆಧ್ಯತೆ ನೀಡಿರುತ್ತಾರೆ.ಆತನನ್ನು ಆದರ್ಶದ ಮೇರು ಪರ್ವತದ ಮೇಲೆ ಪ್ರತಿಷ್ಠಾಪಿಸಿದ್ದಾರೆ. ಆಧುನಿಕ

ಪ್ರಪಂಚದ ದಲಿತ ಪ್ರಜ್ಞೆಯ ಮೂಲ ಆಶಯ ಬೀಜ ತ್ರೇತಾಯುಗದಲ್ಲೇ (ಶ್ರೀರಾಮನ ರಾಜ್ಯದಲ್ಲೇ) ನೆಲಸೇರಿತ್ತೆಂದು 'ಶ್ರೀ ಸಾಮಾನ್ಯರ ಯುಗದ ಉದಯವೇ ರಾಮರಾಜ್ಯ' ಎಂಬ ಉಕ್ತಿ ಬಿಂಬಿಸುತ್ತದೆ.

ದುರಂತ ನಾಯಕ, ರಾವಣ, ಯುದ್ಧದಲ್ಲಿ ಸೋತದ್ದು ದುರ್ಬಲಶಕ್ತಿ ಪ್ರದರ್ಶನದಿಂದಲ್ಲ. ಸ್ವಾಭಿಮಾನದ ದೌರ್ಬಲ್ಯದಿಂದ, ರಾಮನನ್ನು ಯುದ್ಧದಲ್ಲಿ ಸೋಲಿಸಿ, ಸೀತೆಯನ್ನು ಆತನಿಗೊಪ್ಪಿಸ ಬಯಸುವ ಧೀರೋದ್ಧಾತ್ತ ನಿಲುವು, ರಾವಣನ ಆತ್ಮಾಭಿಮಾನ ಹಾಗೂ ಧೈರ್ಯ, ಸ್ಥೈರ್ಯವನ್ನು, ಪ್ರತಿಮಿಸುತ್ತದೆ. ಪಾತ್ರ ಚಿತ್ರಣಕ್ಕೆ ಕವಿ ನೀಡಿರುವ ಈ ಹೊಸ ತಿರುವು, ಸೀತಾ ಅಗ್ನಿಪ್ರವೇಶ ಸನ್ನಿವೇಶ, ವಿಭೀಷಣನ ತ್ಯಾಗಬುದ್ಧಿ, ಭರತನ ಹೊಸ ಕಲ್ಪನೆಯ ಅಗ್ನಿ ಪ್ರವೇಶ ಪ್ರಸಂಗ ಮುಂತಾದ ಪ್ರಸಂಗಗಳಿಗೆ ಹೊಸ ತಿರುವು, ನಿಲುವು ನೀಡಿ ಸೃಜನತೆಯ ಔನ್ನತ್ಯ ಮುಟ್ಟಿದ್ದಾರೆ. ಈ ವಿಚಾರಧಾರೆಗಳು ತೌಲನಿಕ ಅಧ್ಯಯನಕ್ಕೆ ಗ್ರಾಸವಾಗುತ್ತವೆ.

ಅನುಕರಣಉಕ್ತಿಗಳು, ಅನುರಣನ ಶಬ್ದಗಳು, ಶಬ್ದ ಚಿತ್ರಗಳು,ಉಪಮಾರೂಪಕಗಳು,ಗಾದೆ, ಸೂಕ್ತಿ, ನುಡಿಕಟ್ಟುಗಳು, ರೂಪಕಾಲಂಕಾರ, ಪ್ರತಿಮೆಗಳು, ನವರಸ ಸೌರಭ ಮುಂತಾದ ಕಾವ್ಯ ರಚನಾ ಪರಿಕರಗಳು ಈ ಕಾವ್ಯದ ಮಹತ್ವವನ್ನು ವೃದ್ಧಿಸಿವೆ.

'ಶ್ರೀ ರಾಮಾಯಣ ಮಹಾನ್ವೇಷಣಂ' ಸರ್ವಕಾಲಿಕ, ಪಾಂಡಿತ್ಯಪೂರ್ಣ, ಮೌಲಿಕ ಕೃತಿಯಾಗಿ ನಿಲ್ಲುವುದರಲ್ಲಿ ಸಂದೇಹವಿಲ್ಲ, ಈ ಪ್ರತಿಭಾವಂತರಿಗೆ ಪ್ರಶಸ್ತಿ/ಪುರಸ್ಕಾರಗಳು ಅರಸಿಬರಲಿವೆ. ಈ ಕೃತಿ ರಾಷ್ಟ್ರದ ಮೇರು ಕೃತಿಗಳಲ್ಲಿ ಒಂದಾಗಿ ವಿಜೃಂಭಿಸುವುದರಲ್ಲಿ ಸಂದೇಹವಿಲ್ಲ ಎಂದು ಧಾರಾಳವಾಗಿ ಹೇಳಬಹುದು. ಇಂತಹ ಅದ್ಭುತ ಕೃತಿಯನ್ನು ನೀಡಿರುವ ಶ್ರೀ ಮೊಯಿಲಿಯವರಿಗೆ ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತ ಇಂದಿನ ಮಹಾಕವಿಗೆ ಹೃತ್ಪೂರ್ವಕವಾಗಿ ಶುಭಾಶಯ ಕೋರುತ್ತಿದ್ದೇನೆ.

-ಎಸ್. ವಿ. ಶ್ರೀನಿವಾಸ್ ರಾವ್

## ೩. ಯದುಗಿರಿಯಮ್ಮನವರ ಕೀರ್ತನೆಗಳು :

ಸಂ. ಪ್ರೊ॥ ನಾ. ಗೀತಾಚಾರ್ಯ, ಡಾ॥ ನೀ. ಕೃ. ರಾಮಶೇಷನ್, ಪ್ರ. ನಾರಾಯಶರ್ಮ ಸಂಸ್ಕೃತಿ ಕೇಂದ್ರ, ಬೆಂಗಳೂರು-2003, ಡೆಮ್ಮಿ 8/1ಪುಟ. ಬೆಲೆ : ರೂ.

ಕವಿರಾಜಮಾರ್ಗಕಾರನ ಕನ್ನಡ ನಾಡವರು 'ಕುಱಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳ್' ಎಂಬ ಹೆಮ್ಮೆಯ ಮಾತಿನಂತೆ ಕಾವ್ಯ ಕಾವೇರಿ ಅಂದಿನಿಂದ ಇಂದಿನ ವರೆಗೂ ಹರಿದುಬಂದಿದೆ. ಆ ಪ್ರವಾಹದಲ್ಲಿ ಶಿವಶರಣೆಯರ ವಚನಗಳೂ ಅಜ್ಞಾತ ಕವಯಿತ್ರಿಯರು ಹಾಡಿಕೊಳ್ಳುತ್ತಿದ್ದ ತ್ರಿಪದಿ, ಚೌಪದಿ, ಸಾಂಗತ್ಯ, ತತ್ತ್ವಪದಗಳು, ಗರತಿಯರ ಹಾಡುಗಳು, ಭಕ್ತಿ ಗೀತೆಗಳೂ ಸೇರಿವೆ. ಅವು ಕನ್ನಡ ಕಾವೇರಿಗೆ ಕನ್ನಡತಿಯ ಕೊಡುಗೆಯಾದ ಒಂದು ಉಪನದಿ.

ಸುಮಾರು 18ನೆಯ ಶತಮಾನದಲ್ಲಿ ಹೆಳವನಕಟ್ಟೆ ಗಿರಿಯಮ್ಮನಿಂದ ರಚಿತವಾದ ವಿಷ್ಣುಭಕ್ತಿಪ್ರಧಾನವಾದ ಹಾಡುಗಳ ವರಂಪರೆಯೇ ಮುಂದೆ 19ನೆಯ ಶತಮಾನದಲ್ಲಿ ಮುಂದುವರಿದು ಕಾವ್ಯ ರಚನೆಯೇ ಮುಖ್ಯವಲ್ಲದಿದ್ದರೂ ಅನೇಕ ಸ್ತ್ರೀಯರಿಗೆ ಅವರಲ್ಲಿದ್ದ ದೈವಭಕ್ತಿ ಅಭಿವ್ಯಕ್ತವಾಗಲು ಹಾಡುಗಳೇ ಮುಖ್ಯ ವಾಹಕಗಳಾಗಿ ಕವಯಿತ್ರಿಯರಾದರು. ಅಂತಹ ಕವಯಿತ್ರಿಯರಲ್ಲಿ ಯದುಗಿರಿಯಮ್ಮನವರೂ ಒಬ್ಬರು. ಅವರು ಹುಟ್ಟಿದ್ದೂ ಶ್ರೀ ವೈಷ್ಣವ ಸಂಪ್ರದಾಯಸ್ಥರಮನೆ. ಮೆಟ್ಟಿದ್ದೂ ಅದೇ ಸಂಪ್ರದಾಯಸ್ಥರಮನೆ.

ಆ ಕಾಲದಲ್ಲಿ ಯಾವ ಮಂಗಳ ಕಾರ್ಯವಾದರೂ ಎಷ್ಟೇ ವಾದ್ಯ, ಮಂತ್ರ ಘೋಷಣೆಗಳಿದ್ದರೂ ಹೆಣ್ಣುಮಕ್ಕಳ ಹಾಡಿನಿಂದಲೇ ಪ್ರಾರಂಭವಾಗಬೇಕಾಗಿತ್ತು. ಆಗಿನ ಕಾಲದ ನನ್ನ ಅಜ್ಜಿ ಹೇಳುತ್ತಿದ್ದರು. "ಹಾಡು ಹೇಳದೆ ಮೂಗಾರತಿ ಎತ್ತಿದರೆ ಮೂಗು ಮಕ್ಕಳು ಹುಟ್ಟುತ್ತಾರೆ". ಎಂದು, ಯದುಗಿರಿಯಮ್ಮನವರಿಗೆ ಪಾರಂಪರ್ಯವಾಗಿ ಸಂಪ್ರದಾಯದ ಹಾಡುಗಳು ಬಂದಿರಬಹುದು. ನಂತರ ಅವರಿಗೆ ನಾಲಾಯರ ಪ್ರಬಂಧ, ಮುಕುಂದಮಾಲಾ ಸ್ತೋತ್ರ, ವಿಷ್ಣು ಸಹಸ್ರನಾಮ ಸ್ತೋತ್ರ ಇವೇ ಮೊದಲಾದ ದೈವಿಕ ಸ್ತೋತ್ರಗಳು ಬಾಯಿಪಾಠವಾಗಿದ್ದುದರಿಂದ ಶಬ್ದ ಸಂಪತ್ತಿಗೇನೂ ಕೊರತೆಯಿರಲಿಲ್ಲ. ಆ ಕಾಲದಲ್ಲಿ ಸಂಗೀತ, ಸಂಸ್ಕೃತ ಮತ್ತು ಕನ್ನಡ ಸಾಹಿತ್ಯಗಳಲ್ಲಿ ನುರಿತ ಹರಿದಾಸರ ಹರಿಕಥೆಗಳು ಸಾಮಾನ್ಯ ಜನರ ಮೇಲೆ ಹೆಚ್ಚು ಪ್ರಭಾವವನ್ನು ಬೀರುತ್ತಿದ್ದಂತೆಯೇ ಯದುಗಿರಿಯಮ್ಮನವರ ಮೇಲೂ ಉಂಟಾದ ಆ ಪ್ರಭಾವವು ಅವರ ರಚನೆಗೆ ಪೂರಕವಾಗಿರಬಹುದು. ಅಮ್ಮನವರ ಭಕ್ತಿಪರವಾದ ಹಾಡುಗಳ ಮಧ್ಯೆ ಅನೇಕ ಪೂರ್ವ ಕಥೆಗಳನ್ನು ಜ್ಞಾಪಿಸಿಕೊಳ್ಳಬೇಕಾದಂಥ ಪದಗಳು ಸೇರಿವೆ. ಮುಖ್ಯವಾಗಿ ಗಮನಿಸಬೇಕಾದುದೆಂದರೆ ಅವರ ಕೀರ್ತನೆಗಳಲ್ಲಿ ಭಗವಂತನಿಗೆ ಆತ್ಮಸಮರ್ಪಣೆ ಶರಣಾಗತಿಯ ಹಾಡುಗಳಿವೆಯೇ ಹೊರತು ಮಾನವರಿಗೆ ಸಂಬಂಧಪಟ್ಟ ಸಂಪ್ರದಾಯದ ಹಾಡುಗಳಿಲ್ಲ. ಭಕ್ತಿಯೇ ಪ್ರಧಾನವಾದ ಸ್ತುತಿಗಳು ಮತ್ತು ಮೂರ್ತಿ ದರ್ಶನದ ವರ್ಣನೆಗಳು, ವಿಗ್ರಹಗಳಿಗೆ ಅಲಂಕಾರಮಾಡುವ ರೀತಿ ಆಭರಣಗಳ ತಪಶೀಲು ಎಲ್ಲವನ್ನೂ ಬಹಳ ಸೂಕ್ಷ್ಮವಾಗಿ ಗಮನಿಸಿ ಹಾಡುಗಳನ್ನು ರಚಿಸಿದ್ದಾರೆ. ಸಾಮಾನ್ಯವಾಗಿ ಮಹಿಳೆಯರು ಛಂದಸ್ಸಿಗೆ ಹೆಚ್ಚು ಗಮನ ಕೊಡದಿದ್ದರೂ ಭಕ್ತಿಭಾವ ಪೂರ್ಣವಾಗಿ ಮನತುಂಬಿ,ಎದೆ ತುಂಬಿ ಆಸ್ಫೂರ್ತಿಯ ಸೆಲೆಯು ಮೀಟಿ ಅದಕ್ಕೆ ತಕ್ಕರಾಗದಲ್ಲಿ ಲಯಬದ್ಧವಾಗಿ ಒಂದು ಪಾದವು ಆವಿರ್ಭವಿಸಿದಾಗ ಮಿಕ್ಕ ಪಾದಗಳೂ ತಕ್ಕಪದಗಳೂ ಹೊರಹೊಮ್ಮಿ ಜೋಡಣೆಗೊಂಡು. ಪಲ್ಲವಿ, ನುಡಿಗಳು ರಚನೆಯಾಗುವುವು. ಹಾಗೆ ರಚಿತವಾದ ಅಮ್ಮನವರ ಹಾಡುಗಳು ಬಹುಮಟ್ಟಿಗೆ ಪ್ರಾಸಬದ್ಧವಾಗಿಯೂ ಇವೆ. ಶ್ರೀ ರಂಗನಾಥನ ಉತ್ಸವಗಳ ಹಾಡುಗಳಂತೂ ಪ್ರತಿನಿತ್ಯದ ಉತ್ಸವಗಳನ್ನು ಸೂಕ್ಷ್ಮಾವಲೋಕನ ಮಾಡಿ ತದೇಕ ಚಿಂತನೆಯಿಂದ ಹೊರಹೊಮ್ಮಿದ ಹಾಡುಗಳಾಗಿವೆ. ಆಯಾ ಉತ್ಸವ ಮೂರ್ತಿಗಳನ್ನೇ ನಮ್ಮ ಕಣ್ಣ ಮುಂದೆ ತಂದು ನಿಲ್ಲಿಸುತ್ತಾರೆ. ಅದಲ್ಲದೆ ಮತ್ತೊಂದು ವಿಶೇಷವೆಂದರೆ ಹಾಡಿನ ಸಂದರ್ಭಗಳ ಮಾಸ, ತಿಥಿ, ನಕ್ಷತ್ರ ಮುಂತಾದುವುಗಳನ್ನು ಸೂಚಿಸಿದ್ದಾರೆ.

ಈ ಕಾಲದಲ್ಲಿ ಯಾತ್ರೆ ಹೊರಟವರು ದಿನಚರಿಯನ್ನು ಬರೆದಿಡುತ್ತಾರೆ. ಆ ಕಾಲದ ಯದುಗಿರಿಯಮ್ಮನವರು ತಾವು ಕಂಡ ದೇವತಾ ದರ್ಶನವನ್ನು ಹಾಡುಗಳ ಮೂಲಕ ನಮ್ಮ ಕಣ್ಣಮುಂದೆ ಯಥಾವತ್ತಾಗಿ ಪ್ರತಿಬಿಂಬಿಸುತ್ತಾರೆ. ಅವರು ಹಾಡುಗಳ ರಚನೆಗಾಗಿ ಕುರಿತು

ಓದಿದವರೂ ಅಲ್ಲ ಬರೆದವರೂ ಅಲ್ಲ. ಪೂರ್ವಕಾಲದಲ್ಲಿ ಪುಸ್ತಕಗಳಲ್ಲಿ ಬರೆದಿಟ್ಟುಕೊಂಡರೆ ಅದರಲ್ಲೇ ಉಳಿಯುವುದೇ ಹೊರತು ಕಂಠಪಾಠ ಮಾಡುವುದಿಲ್ಲವೆಂದು ಹಿರಿಯರು ಹೇಳಿ ಕೊಡುತ್ತಿದ್ದರೇ ವಿನಹ ಬರೆದಿಟ್ಟುಕೊಳ್ಳಲು ಅನುಮತಿಸುತ್ತಿರಲಿಲ್ಲ. ಆದರೂ ಯದುಗಿರಿಯಮ್ಮನವರು ಅವರ ಮೊಮ್ಮಕ್ಕಳು ಬರೆದಿಟ್ಟುಕೊಳ್ಳಲು ಅನುಮತಿಸಿದ್ದು ಹರಿದಾಸ ಸಾಹಿತ್ಯಕ್ಕೆ ಉತ್ತಮ ಕೊಡುಗೆಯಾಗಿದೆ. ಅವರ ದೂರ ದೃಷ್ಟಿ ಪ್ರತೀಕವಾಗಿದೆ.

ಆ ಹಾಡುಗಳನ್ನು ಧ್ವನಿಸುರುಳಿ ಮಾಡಿಸಿ ಆಯಾ ಉತ್ಸವಕಾಲಗಳಲ್ಲಿ ಯಾತ್ರಾರ್ಥಿಗಳು ಕೇಳುವಂತೆ ಮಾಡಿದರೆ ಯದುಗಿರಿಮ್ಮನವರಿಗೆ ತಕ್ಕ ಕೃತಜ್ಞತೆ ಸಲ್ಲಿಸಿದಂತಾಗುವುದು.

ಈ ಗ್ರಂಥವನ್ನು ನಾರಾಯಣ ಶರ್ಮ ಸಂಸ್ಕೃತಿ ಕೇಂದ್ರದ ಮೂಲಕ ಪ್ರೊ|| ನಾ. ಗೀತಾಚಾರ್ಯ ಮತ್ತು ಡಾ|| ನಿ.ಕೃ. ರಾಮಶೇಷನ್ ಅವರುಗಳು ಉತ್ತಮವಾಗಿ ಸಂಪಾದಿಸಿದ್ದಾರೆ. ನಾರಾಯಣ ಶರ್ಮ ಸಂಸ್ಕೃತಿ ಕೇಂದ್ರ 'ಶ್ರೀ ವೈಷ್ಣವ ಸಾಹಿತ್ಯಮಾಲ' ಎಂಬ ಒಂದು ಗ್ರಂಥಮಾಲೆಯನ್ನು ಆರಂಭಿಸಿ ಅದರಲ್ಲಿ ಆರನೇ ಪುಸ್ತಕವಾಗಿ ಇದನ್ನು ಪ್ರಕಟಿಸಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಶ್ರೀ ವೈಷ್ಣವ ಸಾಹಿತ್ಯ ಎಂಬುದೇ ಹೊಸ ವಿಚಾರ. ಈ ವಿಚಾರವನ್ನು ಅದರಲ್ಲಿ ಹರಿದಾಸ ಸಾಹಿತ್ಯದ ಶೋಧವನ್ನು ಅದರ ಸ್ವರೂಪ ಮತ್ತು ಹರಹನ್ನೂ ಪ್ರಸ್ತಾವನೆಯ ಮೊದಲ ಭಾಗದಲ್ಲಿ ಗೀತಾಚಾರ್ಯರು ತುಂಬ ಮೌಲಿಕವಾಗಿ ವಿವರಿಸಿದ್ದಾರೆ. ಕವಿ ಕಾವ್ಯ ವಿಚಾರವನ್ನು ಎರಡನೇ ಭಾಗದಲ್ಲಿ ಇಬ್ಬರು ಸಂಪಾದಕರೂ ಸೂಕ್ತವಾಗಿ ವಿವೇಚಿಸಿದ್ದಾರೆ. ಅನುಬಂಧದಲ್ಲಿ ಟಿಪ್ಪಣಿಗಳು ಕಠಿಣ ಪದಗಳ ಅರ್ಥಗಳೆಲ್ಲ ಇದ್ದು ಗ್ರಂಥ ಸಂಪಾದನೆಯ ಪ್ರಾಚೀನ ಪರಂಪರೆಯನ್ವಯ ಈ ಗ್ರಂಥ ಸಂಪಾದನೆಯಾಗಿದ್ದು ಪ್ರಕಾಶಕರು ಮತ್ತು ಸಂಪಾದಕರು ಕನ್ನಡ ಸಾಹಿತ್ಯಕ್ಕೆ ಒಂದು ಉತ್ತಮ ಪುಸ್ತಕ ಕೊಟ್ಟಿದ್ದಾರೆ.

**-ಎಚ್. ವಿ. ಸಾವಿತ್ರಮ್ಮ**

## ೪.'ರಾಜಯೋಗಿ' :

ಲೇಖಕರು : ಶ್ರೀ ಆದ್ಯ ರಾಮಾಚಾರ್ಯ, ಪ್ರಕಾಶಕರು : ವರದರಾಜ್ ಪ್ರಕಾಶನ, 114/ ವೈ. ಭೀಮರಥಿ, 4ನೇ ಮುಖ್ಯರಸ್ತೆ, 4ನೇ ಘಟ್ಟ, 7ನೇ ವಿಭಾಗ, ಬನಶಂಕರಿ 3ನೇ ಹಂತ ಬೆಂಗಳೂರು-560 085. ಬೆಲೆ : ರೂ. 300/- ಪುಟಗಳು : xvi+388, ಪ್ರಕಟಣೆ : ಪ್ರಥಮ ಮುದ್ರಣ-2004.

ನಾಡಿನ ಗಣ್ಯ ಹಿರಿಯ ಸಾಹಿತಿಗಳೊಬ್ಬರಾದ ಈ ಆದ್ಯ ರಾಮಾಚಾರ್ಯರು ಸುಮಾರು ಹತ್ತು ವರ್ಷಗಳ ಅವಿಶ್ರಾಂತ ಶ್ರಮದಿಂದ ಶಿವಾಜಿಯು ನಡೆದ ದಾರಿಯಲ್ಲೇ ಮತ್ತೆ ತಾವು ಶ್ರಮಿಸಿ, ಕೋಟೆ, ಕೊತ್ತಲು, ಅರಮನೆ, ಸೆರೆಮನೆ, ಹಳ್ಳಿನಗರ, ಮುಂತಾದವನ್ನೆಲ್ಲಾ ವೀಕ್ಷಿಸಿ ಹತ್ತು ಹಲವು ಮೂಲಗಳಿಂದ ವಿಷಯ ಸಂಗ್ರಹಿಸಿ 'ರಾಜಯೋಗಿ' ಚಾರಿತ್ರಿಕ ಕೃತಿಯನ್ನು ರಚಿಸಿದ್ದಾರೆ. ಚಾರಿತ್ರಿಕ, ಪೌರಾಣಿಕ, ಧಾರ್ಮಿಕ ಹಾಗೂ ಸಾಮಾಜಿಕ 70 ಕ್ಕೂ ಹೆಚ್ಚು ಕಾದಂಬರಿಗಳನ್ನು ರಚಿಸಿ ಸೃಜನಶೀಲತೆಯನ್ನು ಪರಿಪಕ್ವ ಮಾಡಿಕೊಂಡಿರುವ ರಾಮಾಚಾರ್ಯರು ಈ ಕೃತಿ ರಚನೆಯಲ್ಲಿ ತಮ್ಮ ಕೌಶಲ್ಯವನ್ನು ಮೆರೆದಿದ್ದಾರೆ. ಪಾತ್ರ ರಚನೆಯಲ್ಲಿ ಚಾರಿತ್ರಿಕ ಸತ್ಯವನ್ನು ಪ್ರತಿಮಿಸಿದ್ದಾರೆ, ಸಂಭಾಷಣೆಯಲ್ಲಿ ಗ್ರಾಂಥಿಕ ಭಾಷೆಯನ್ನು

ಉಪಯೋಗಿಸಿ, ಐತಿಹಾಸಿಕ ಕಥಾನಕಕ್ಕೆ ಬೇಕೆನಿಸುವ ಭಾಷಾ ಗಾಂಭೀರ್ಯಕ್ಕೆ ಒತ್ತು ನೀಡಿರುತ್ತಾರೆ. ಈ ಕಾದಂಬರಿಯ ಮೂಲ ದ್ರವ್ಯ ಶಿವಾಜಿಯ ಕಥಾನಕವೇ ಆಗಿದ್ದರೂ ಸಂಗ್ರಹಿತ ಚಾರಿತ್ರಿಕ ಮಾಹಿತಿ ಹಾಗೂ ಸಂಬಂಧಿತ ಐತಿಹಾಸಿಕ ಘಟನೆಗಳ ಬಾಹುಳ್ಯದಿಂದಾಗಿ ಈ ಮುದ್ರಿತ 1/4 ಅಷ್ಟದಳದ ಕೃತಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಪಡೆದಿರುತ್ತದೆ. ಶಿವಾಜಿಯ ಜನನ, ಬಾಲ್ಯ, ರಾಜ್ಯ ಸ್ಥಾಪನೆಯ ವಿವಿಧ ಹಂತಗಳು, ಬಂದೆರಗಿದ ಅವಘಡಗಳು, ಯುದ್ಧ ಕೌಶಲ, ಔರಂಗಜೇಬನ ಕುತಂತ್ರ, ಶ್ರೀ ಸ್ವಾಮಿ ರಾಮದಾಸರ ರಾಜಕೀಯ ಉಪದೇಶಗಳು, ಸ್ನೇಹ ಹೌಹಾರ್ದಭರಿತ ಆಡಳಿತ ವೈಖರಿ ಬಹು ಚೆನ್ನಾಗಿ ವರ್ಣಿತಗೊಂಡಿವೆ. ಶಿವನೇರಿ; ಸಿಂಹಗಢ, ಪುರಂದರಗಡ, ತೋರಣಗಡ, ರಾಜಗಡ, ಪನ್ಹಾಳಗಡ, ರಾಯಗಡ, ಜಂಜೀರಾ ಮುಂತಾದ ಸ್ಥಳಗಳಲ್ಲಿನ ರಕ್ಷಣಾ ವ್ಯೂಹ ರಚನೆಯ ತಂತ್ರಜ್ಞಾನ ನಮ್ಮನ್ನು ಚಕಿತಗೊಳಿಸುತ್ತವೆ.

ಆದ್ಯ ರಾಮಾಚಾರ್ಯರು ಶಿವಾಜಿಯ ರೋಚಕ ಕಥಾನಕದ ಜೊತೆಯಲ್ಲಿ ಮಿಥಿಲಾ ಹಾಗೂ ನೇಪಾಳವನ್ನಾಳಿದ ಕನ್ನಡಿಗರ ಬಗ್ಗೆಯೂ ಮಾಹಿತಿ ನೀಡಿ ಕನ್ನಡ ನಾಡಿನ ಹಿರಿಮೆ-ಗರಿಮೆಯ ಕಿರೀಟಕ್ಕೆ ಹೆಮ್ಮೆಯ ಗರಿ ಮೂಡಿಸಿದ್ದಾರೆ. ಶಿವಾಜಿ ವಂಶಜರು ಕನ್ನಡಿಗರು; ತಾನಸೇನ ಅಪ್ಪಟ ಹಿಂದೂ, ಮುಂತಾದ ರೋಚಕ ಅಂಶದ ಮೇಲೆ ಬೆಳಕು ಚೆಲ್ಲಿ ಉಪಕರಿಸಿದ್ದಾರೆ. ಕಾದಂಬರಿ ರೂಪದ ಈ ಚಾರಿತ್ರಿಕ ಮಾಹಿತಿ ಕೋಶವನ್ನು ನೀಡಿರುವ ಶ್ರೀ ಆದ್ಯ ರಾಮಾಚಾರ್ಯರು ಅಭಿನಂದನಾರ್ಹರು. 'ರಾಜಯೋಗಿ' ನಿಜಕ್ಕೂ ಎಲ್ಲರೂ ಕೊಂಡು ಓದುವ ಗ್ರಂಥ.

**ಎಸ್. ವಿ. ಶ್ರೀನಿವಾಸರಾವ್**

## ೫. ಕಲ್ಲಚ್ಚಿನ ಕನ್ನಡ ಹೊತ್ತಗೆಗಳ ವಿವರಣ ಸೂಚಿ

ಸಂಪಾದಕ : ಗೌ. ವಾ. ಉಮಾಪತಿ ಶಾಸ್ತ್ರೀ, ಶ್ರೀ ಮಂಜುನಾಥೇಶ್ವರ ಸಂಸ್ಕೃತಿ ಸಂಶೋಧನಾ ಪ್ರತಿಷ್ಠಾನ, ಧರ್ಮಸ್ಥಳ-174 216, ಡೆಮಿ ಅಷ್ಟದಳ, ಪು. 112, ಬೆಲೆ : ರೂ. 50/ ಮುದ್ರಣ ವರ್ಷ 2004.

ಪ್ರಾಚೀನ ಹಸ್ತಪ್ರತಿಗಳ ಸಂಗ್ರಹ, ಸಂರಕ್ಷಣೆ, ಸಂಶೋಧನೆ ಮತ್ತು ಸಂಪಾದನೆಯನ್ನೇ ತಮ್ಮ ಕಾಯಕವಾಗಿಸಿಕೊಂಡಿರುವ ಹಿರಿಯ ವಿದ್ವಾಂಸರಾದ ಶ್ರೀ ಗೌ. ಮ. ಉಮಾಪತಿ ಶಾಸ್ತ್ರಿಗಳು ಶ್ರೀ ಧರ್ಮಸ್ಥಳದ ಶ್ರೀ ಮಂಜುನಾಥೇಶ್ವರ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನದಲ್ಲಿ ಅತ್ಯಂತ ನಿಷ್ಠೆಯಿಂದ ಈ ಕಾಯಕವನ್ನು ನಡೆಸುತ್ತಿದ್ದಾರೆ. ಹಲವಾರು ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸಿರುವ ಮತ್ತು ಸಾವಿರಾರು ಓಲೆಗರಿ-ಕಾಗದ ಹಸ್ತಪ್ರತಿಗಳನ್ನು ಅಚ್ಚುಕಟ್ಟಾಗಿ ಸಂಗ್ರಹಿಸಿ ಸಂರಕ್ಷಿಸುತ್ತಿರುವ ಈ ಪ್ರತಿಷ್ಠಾನದ ಇನ್ನೊಂದು ಹೆಮ್ಮೆಯ ಪ್ರಕಟನೆ ಪ್ರಸ್ತುತ ಗ್ರಂಥ. ತಮ್ಮ ಸಂಗ್ರಹದಲ್ಲಿರುವ ವಿವಿಧ ಬಗೆಯ ಹಸ್ತಪ್ರತಿಗಳನ್ನು ಹೀಗೆ ವಿವರಣಾತ್ಮಕ ಸೂಚಿಗಳ ಮೂಲಕ ನಿರಂತರವಾಗಿ ಪ್ರಕಟಿಸುತ್ತಿರುವ ಪ್ರತಿಷ್ಠಾನ ಈ ಗ್ರಂಥದಲ್ಲಿ ತನ್ನ ಸಂಗ್ರಹದಲ್ಲಿರುವ ಕಲ್ಲಚ್ಚಿನ ಕನ್ನಡ ಗ್ರಂಥಗಳ ಸೂಚನೆಯನ್ನು ವಿವರಣಾತ್ಮಕವಾಗಿ ನೀಡಿದೆ.

ಮುದ್ರಣ ಯಂತ್ರದ ತಂತ್ರಜ್ಞಾನವನ್ನೇ ಬಳಸಿಕೊಂಡು ಅಚ್ಚಿನ ಮೊಳೆಗಳ ಸಹಾಯವಿಲ್ಲದೆ ಕೈಬರಹದ ಪ್ರತಿಯನ್ನೇ ಕಲ್ಲಿನ ಮೇಲೆ ಅಚ್ಚೊತ್ತಿ ಅದರಿಂದ ಪ್ರತಿಗಳನ್ನು ಮುದ್ರಿಸುವ ಈ ಕಲ್ಲಚ್ಚಿನ ಮುದ್ರಣ ಕರ್ನಾಟಕದಲ್ಲಿ ಮುದ್ರಣಯಂತ್ರಗಳನ್ನು ತಂದ ಅಚ್ಚಿನ ಮೊಳೆಗಳನ್ನು ಉಳಿಸತೊಡಗಿದ್ದ (1951) ನಂತರ ಮೊಳೆಜೊಡಣೆಯ ಕಲೆ ಸುಲಭವಾಗಿ ಕಲ್ಲಚ್ಚಿನ ಮುದ್ರಣ ಕಡಮೆಯಾಯಿತು. 1880ರ ಹೊತ್ತಿಗೆ ಕಣ್ಮರೆಯಾದ ಈ ದೇಶೀಯ ಮುದ್ರಣ ಶೈಲಿಯಲ್ಲಿ ಮುದ್ರಣವಾದ ಗ್ರಂಥಗಳು ಕಡಿಮೆಯಾದರೂ ಅಮೂಲ್ಯವಾದವುಗಳು.

ಹಸ್ತಪ್ರತಿಗಳ ಅಧ್ಯಯನದಲ್ಲಿ ಈ ಕಲ್ಲಚ್ಚಿನ ಪುಸ್ತಕಗಳಿಗೆ ಮಹತ್ವದ ಸ್ಥಾನವಿದೆ. ದಾಸರ ಪದಗಳು, ಕುಮಾರವ್ಯಾಸ ಭಾರತ ಜೈಮಿನಿಭಾರತ, ಚೆನ್ನಬಸವ ಪುರಾಣ, ಮುಂತಾದ ಪ್ರಮುಖ ಗ್ರಂಥಗಳು ಕಲ್ಲಚ್ಚಿನ ಮುದ್ರಣದಲ್ಲಿವೆ. ಸುಂದರವಾದ ಬರವಣಿಗೆಯಲ್ಲಿರುವ ಈ ಗ್ರಂಥಗಳು ಅಪರೂಪದ ಹಸ್ತಪ್ರತಿಗಳೆನಿಸಿವೆ. ಈ ಗ್ರಂಥಗಳ ಶಾಸ್ತ್ರೀಯ ಸಂಪಾದನೆಯ ಸಮಯದಲ್ಲಿ ಇವುಗಳಲ್ಲಿರುವ ಪಾಠ ಮಹತ್ವವನ್ನು ಪಡೆಯುತ್ತವೆ. ಆ ಕಾಲದ ಬರವಣಿಗೆ ಶೈಲಿಗೆ ಮಾದರಿಯಾಗುತ್ತವೆ. ಕಲ್ಲಚ್ಚಿನ ಮುದ್ರಣದ ಇತಿಹಾಸಕ್ಕೆ ಸಾಕ್ಷಿಯಾಗುವಂತಹ ಕಲ್ಲಚ್ಚಿನ ಗ್ರಂಥ ಪ್ರತಿಗಳನ್ನು ಜೋಪಾನವಾಗಿ ಸಂರಕ್ಷಿಸುವುದು ಅತ್ಯಗತ್ಯವಾಗಿದೆ.

ಈ ಹಿನ್ನೆಲೆಯಲ್ಲಿ ಗೌ. ಮ. ಉಮಾಪತಿಶಾಸ್ತ್ರಿ ಅವರು ಸಂಪಾದಿಸಿರುವ ಪ್ರಸ್ತುತ ಗ್ರಂಥ ಮೌಲಿಕ ಕೃತಿಯಾಗಿದೆ. ಸಂಶೋಧನೆ ಮತ್ತು ಅಧ್ಯಯನಾಸಕ್ತರಿಗೆ ಉಪಯುಕ್ತವಾಗುವ ಉತ್ತಮ ಆಕರ ಗ್ರಂಥವಾಗಿದೆ. ಇದರಲ್ಲಿ 38 ಗ್ರಂಥಗಳ ವಿವರಣ ಸೂಚಿಯಿದೆ. ಮೈಸೂರು, ಮಂಗಳೂರು, ಬಾಂಬೆ, ಸವಣೂರು, ಧಾರವಾಡ, ಮುಂತಾದ ಸ್ಥಳಗಳಲ್ಲಿದ್ದ ಮಿಷನರಿ ಮತ್ತು ದೇಶೀಯ ಮುದ್ರಣಾಕ್ಷರಶಾಲೆ (ಪ್ರಿಂಟಿಂಗ್ ಪ್ರೆಸ್)ಗಳಿಂದ ಕಲ್ಲಚ್ಚಿನಲ್ಲಿ ಮುದ್ರಣವಾಗಿರುವ ಈ ಗ್ರಂಥಗಳು ಬಹುಮುಖ ಅಧ್ಯಯನಕ್ಕೆ ಆಕರಗಳಾಗಿವೆ. ಬಸವಪುರಾಣ ಗ್ರಂಥ ಫುಲ್‌ಸ್ಕೇಪ ಆಕಾರದಲ್ಲಿ 670 ಪುಟಗಳುಳ್ಳ ಬೃಹತ್ ಗ್ರಂಥವಾಗಿದೆ. ಮಂಗಳೂರಿನ ಬಾಸಲ್ ಮಿಷನ್ ಸಂಸ್ಥೆಯಲ್ಲಿ 1850 ರಲ್ಲಿ ಇದು ಮುದ್ರಣವಾಗಿದೆ. 'ಪತ್ರವ್ಯವಹಾರ ಬೋಧಿನಿ' ಎಂಬ ಇನ್ನೊಂದು ಗ್ರಂಥ ಬೆಳಗಾಂನ ರಾಮತತ್ವ ಪ್ರಕಾಶನದಿಂದ ಮುದ್ರಣವಾಗಿದೆ. ಇದೊಂದು ಅಪರೂಪದ ಗ್ರಂಥವಾಗಿದ್ದು ಭಾಷೆ ಮತ್ತು ಸಂಸ್ಕೃತಿಯ ಅಧ್ಯಯನಕ್ಕೆ ಬಹಳ ಉಪಯುಕ್ತವಾಗುತ್ತದೆ. ಕನ್ನಡದ ವ್ಯವಹಾರ ಭಾಷೆಯಲ್ಲಾಗುತ್ತಿರುವ ಬದಲಾವಣೆಗೆ ಇದೊಂದು ಮೈಲಿಗಲ್ಲಾಗಿದೆ.

ಹೀಗೆ ಅನೇಕ ಮೌಲಿಕ ವಿಷಯಗಳಿಂದ ಕೂಡಿರುವ ಈ ಗ್ರಂಥದ ಸಂಪಾದಕರು ಮತ್ತು ಪ್ರಕಾಶಕರು ಅಭಿನಂದನಾರ್ಹರಾಗಿದ್ದಾರೆ. ಸಂಪಾದನೆಯಲ್ಲಿನ ಅಚ್ಚುಗಟ್ಟುತನ, ಶಿಸ್ತುಬದ್ಧಕ್ರಮ ಮತ್ತು ಪಾಂಡಿತ್ಯಪೂರ್ಣ ಟಿಪ್ಪಣಿಗಳು ಈ ಗ್ರಂಥದ ಮೌಲ್ಯವನ್ನು ಹೆಚ್ಚಿಸಿವೆ ಡಾ॥ ಶ್ರೀನಿವಾಸ ಹಾವನೂರರ ಮುನ್ನುಡಿ ಮೌಲಿಕವಾಗಿದೆ. ಗ್ರಂಥದ ಮುಖಪುಟ ಆಕರ್ಷಕವಾಗಿದೆ.

**-ನಾ. ಗೀತಾಚಾರ್ಯ**

## ೬. ಕವಿ ಕಂಡ ಕವಿ

ಸಂ. : ಹೊ. ರಾ. ಸತ್ಯನಾರಾಯಣರಾವ್, ಬಿ. ಎಸ್. ಗುಂಡುರಾವ್ ವಿಜಯಪ್ರಕಾಶನ ಗಿರಿನಗರ, ಬೆಂಗಳೂರು-85. 2003, ಬೆಲೆ : ರೂ. 120/- ಡೆಮ್ಮಿ 1/8 ಪುಟ.

ಇದೊಂದು ಅಪರೂಪದ ಕೃತಿ. 'ಕವಿಗೆ ಕವಿ ಮಣಿವನ್' ಎಂಬ ಕವಿವಾಣಿಯ ಆಶಯ ಈ ಕೃತಿಯಲ್ಲಿ ಯಶಸ್ವಿಯಾಗಿದೆ. ಕನ್ನಡದ ನವೋದಯ ಕಾಲದಿಂದ ಇಂದಿನವರೆಗಿನ ವಿವಿಧ ಕವಿಗಳು ತಮ್ಮ ಸಮಕಾಲೀನ, ಹಿರಿಯ, ಕಿರಿಯ ಮತ್ತು ಪ್ರಾಚೀನ ಕನ್ನಡ ಕವಿಗಳನ್ನು ಕುರಿತು ಬರೆದಿರುವ ಕವಿತೆಗಳ ಸಂಕಲನವಾದ ಈ ಕೃತಿಯಲ್ಲಿ 79 ಪ್ರಸಿದ್ಧ ಸಾಹಿತಿಗಳನ್ನು ಕುರಿತು 87 ಜನ ಕವಿಗಳು ರಚಿಸಿರುವ ಸುಮಾರು 200 ಕವನಗಳಿವೆ. ಕವಿಗಳನ್ನು ಕುರಿತು ತಮ್ಮ ಭಾವನೆಗಳನ್ನು ಮುಕ್ತವಾಗಿ ಅಭಿವ್ಯಕ್ತಿಸಿದ್ದಾರೆ. ಇದರಲ್ಲಿ ಸ್ತುತಿಗಳಿವೆ, ಹೊಗಳಿಕೆಗಳಿವೆ. ಗೌರವದ ಮಾತುಗಳಿವೆ. ಹಾಗೆಯೇ ಟೀಕೆ-ಟಿಪ್ಪಣಿಗಳೂ ಇವೆ. ಅತ್ಯಂತ ಚಿಕ್ಕದಾಗಿ ಚೊಕ್ಕವಾದ ವ್ಯಕ್ತಿತ್ವದ ಕಿರುಪರಿಚಯಗಳಂತೆ ಭಾಸವಾಗುವ ಈ ಕವಿತೆಗಳು ಕನ್ನಡ ಕಾವ್ಯಲೋಕದ ದಿಗ್ದರ್ಶನವನ್ನೇ ಮಾಡಿಸುತ್ತವೆ. ನವೋದಯ, ನವ್ಯ, ಪ್ರಗತಿಶೀಲ, ಬಂಡಾಯ ಹೀಗೆ ಎಲ್ಲ ಮನೋಭಾವದ ಕವಿತೆಗಳೂ ಇದರಲ್ಲಿವೆ. ಚಿಕಿತ್ಸಕ ಗುಣದ ವಿಮರ್ಶಕನೂ ಇಲ್ಲಿ ಇಲ್ಲದಿಲ್ಲ. ಒಟ್ಟಾರೆ ಇದೊಂದು ಕನ್ನಡ ಕಾವ್ಯಲೋಕದ ಪ್ರತಿಮಾ ಗೃಹ. ಇದನ್ನು ಸಂಪಾದಿಸಿ ಸುಂದರವಾಗಿ ಮುದ್ರಿಸಿರುವ ಸಂಪಾದಕರ ಸಾಹಸ ಮತ್ತು ಶ್ರಮ ಸಾರ್ಥಕವಾದುದು ಮತ್ತು ಅಭಿನಂದನೀಯವಾದುದು.

## ಇತ್ತೀಚೆಗೆ ಬಿಡುಗಡೆಗೊಂಡ ಪುಸ್ತಕಗಳು

1) **'ಅನಂತ ಸಾಹಿತ್ಯ'** : (ಅನಂತಮೂರ್ತಿ ಕೃತಿಗಳ ಅನುಸಂಧಾನ) **'ವ್ಯಾಸಸಾಹಿತ್ಯ'** (ಕಾದಂಬರಿಗಳ ವಿಮರ್ಶಾ ಗ್ರಂಥ) **'ಕಂಡೇರಿ'** (ಕಾ.ತ. ಚಿಕ್ಕಣ್ಣ ಅವರ ಸಮಗ್ರ ಕಥಾ ಸಂಕಲನ) ಪ್ರಕಾಶಕರು : 'ಸುಂದರ ಪ್ರಕಾಶನ', ಅ. ನ. ಸುಬ್ಬರಾವ್ ರಸ್ತೆ, ಹನುಮಂತನಗರ, ಬೆಂಗಳೂರು-19. ಮೇಲ್ಕಂಡ ಮೂರು ಪುಸ್ತಕಗಳನ್ನೂ ಸುಂದರ ಪ್ರಕಾಶನದ ಶ್ರೀ ಗೌರಿಸುಂದರ್ ಸಂಪಾದಿಸಿ, ಮುದ್ರಿಸಿ ಇತ್ತೀಚೆಗೆ ಬಿಡುಗಡೆ ಮಾಡುವ ಸಾಹಸ ಮಾಡಿರುತ್ತಾರೆ. ಪುಸ್ತಕ ಮಾರಾಟವೇ ಸ್ಥಗಿತಗೊಂಡಿರುವ ಈ ದಿನಗಳಲ್ಲಿ ಒಂದರ ನಂತರ ಒಂದು ಮೌಲ್ಯಾಧಾರಿತ ಕೃತಿಗಳನ್ನು ಪ್ರಕಟಿಸುತ್ತಿರುವ ಶ್ರೀ ಗೌರಿಸುಂದರ ಅಭಿನಂದನಾರ್ಹರು.

'ಕರ್ನಾಟಕ ರಾಜಕೀಯ ಚಿಂತನೆ' : (ಎಸ್. ಎನ್. ಸಂಸ್ಮರಣ ಗ್ರಂಥ) ಪ್ರಧಾನ ಸಂಪಾದಕರು ಡಾ|| ದೇ ಜ ಗೌ. ಸಂಪಾದಕರು ಶ್ರೀ ಕೆ. ಆರ್.ಕಮಲೇಶ್ ಪ್ರಕಾಶಕರು : ಎಸ್. ನಿಜಲಿಂಗಪ್ಪ ರಾಷ್ಟ್ರೀಯ ಪ್ರತಿಷ್ಠಾನ, ಬೆಂಗಳೂರು-560001. ಶ್ರೀ ನಿಜಲಿಂಗಪ್ಪನವರ ಜೀವನದ ಎಲ್ಲಾ ಮಜಲುಗಳನ್ನು ಚಿತ್ರಿಸುವ ವಿವಿಧ ಲೇಖಕರ ಲೇಖನಗಳು ಇದರಲ್ಲಿರುವುದಲ್ಲದೆ, ಅವರ ಜೀವನದ ಮೇಲೆ ಪ್ರಭಾವ ಬೀರಿದ ರಾಜಕೀಯ ಪಕ್ಷಗಳ ಇತಿಹಾಸವೂ ಇಲ್ಲಿ ದರ್ಶಿತಗೊಂಡಿದೆ. ಖ್ಯಾತ ವಿದ್ವಾಂಸ ಡಾ|| ದೇ.ಜ.ಗೌ.ರವರ ಪ್ರಧಾನ ಸಂಪಾದಕತ್ವದಲ್ಲಿ ಶ್ರೀ ಕಮಲೇಶ್ ರವರು ಈ ಮೌಲಿಕ ಕೃತಿಯನ್ನು ಸ್ತುತ್ಯಾರ್ಹ ರೀತಿಯಲ್ಲಿ

ಸಂಪಾದಿಸಿದ್ದಾರೆ. ಇದರಲ್ಲಿರುವ ಪ್ರಮುಖ ಪರಿಚ್ಛೇದಗಳು. ಬದುಕು ಸಾಧನೆ ತಾಂತ್ರಿಕ ಚಿಂತನೆ, ಸಾಹಿತ್ಯದಲ್ಲಿ ರಾಜಕೀಯ ಪ್ರಜ್ಞೆ, ಜನಪರ ಚಳುವಳಿಗಳು; ರಾಜಕೀಯ ಪಕ್ಷಗಳು ಎಸ್. ಎನ್. ಜೀವನದ ಪ್ರಮುಖ ಘಟನೆಗಳು.

ಗ್ರಾಮ ಜೀವನ : (ಶ್ರೀ ಎಂ. ಎ. ರಾಜಶೇಖರನ್ ಸಂಭಾವನ ಗ್ರಂಥ) ಪ್ರಧಾನ ಸಂಪಾದಕರು ಡಾ॥ ದೇ.ಜ.ಗೌ. ವ್ಯವಸ್ಥಾಪಕ ಸಂಪಾದಕ; ಗೋ.ರು.ಚ.; ಸಂಪಾದಕ : ಕೆ. ಆರ್. ಕಮಲೇಶ್. ಪ್ರಕಾಶಕರು: ಶ್ರೀ ರಾಜಶೇಖರನ್ ಅಭಿನಂದನ ಸಮಿತಿ, ವಸಂತನಗರ, ಬೆಂಗಳೂರು-52.

ಇದರಲ್ಲಿ ಕರ್ನಾಟಕ ಗ್ರಾಮೀಣಾಭಿವೃದ್ಧಿ ಕುರಿತಾದ 106 ವೈಶಿಷ್ಟ್ಯಪೂರ್ಣ ಲೇಖನಗಳಿವೆ. ರಾಷ್ಟ್ರದ ರಾಜ್ಯದ ಪ್ರಮುಖ ರಾಜಕಾರಣಿಗಳು ಹಾಗೂ ಸಾಹಿತಿಗಳು ಲೇಖನಗಳನ್ನು ರಚಿಸಿ ಈ ಮೂಲಕ ಕೃತಿಗಳನ್ನು ಅಭಿಮಾನಪೂರ್ವಕವಾಗಿ ಎಂ. ವಿ. ರವರಿಗೆ ಅರ್ಪಿಸಿದ್ದಾರೆ. ಈ ಲೇಖನಗಳು ಎಂ. ಎ. ರಾಜಶೇಖರನ್ ರವರ ಅರ್ಥಪೂರ್ಣ, ಅನುಕರಣೀಯ ವ್ಯಕ್ತಿತ್ವಕ್ಕೆ ಕನ್ನಡಿ ಹಿಡಿದಿದೆ.

**'ಗ್ರಾಮದೀಪ್ತಿ' :** (ಎಂ. ವಿ. ರಾಜಶೇಖರನ್ ಬದುಕು-ಬರಹ). ಲೇಖಕರು : ಶ್ರೀ ವತ್ಸ (ಕೆ. ಆರ್. ಕಮಲೇಶ್), ಪ್ರಕಾಶಕರು : ಎಂ. ವಿ. ರಾಜಶೇಖರನ್, ಅಭಿನಂದನ ಸಮಿತಿ ವಸಂತನಗರ, ಬೆಂಗಳೂರು-52. ಇದಲ್ಲಿ ಲೇಖಕರು ಬಹು ಆತ್ಮೀಯವಾಗಿ ರಾಜಶೇಖರನ್ ರವರ ಸಾರ್ಥಕ ಬದುಕನ್ನು ಬಹಳ ಚೆನ್ನಾಗಿ ನಿರೂಪಿಸಿದ್ದಾರೆ. ಅವರ ಗ್ರಾಮೀಣ ಸೇವೆಯ ಮೇಲೆ ಬೆಳಕು ಚೆಲ್ಲಿದ್ದಾರೆ. ಅವರ ಮೇಲೆ ಆದರಾಭಿಮಾನಗಳು ಉಕ್ಕುವಂತೆ ನಿರೂಪಿಸಿದ್ದಾರೆ.

**ಎಸ್. ವಿ. ಶ್ರೀನಿವಾಸರಾವ್**

* * * *

# ಸಾದರ ಸ್ವೀಕಾರ

**1) ಶ್ರೀ ತುಳಸೀ ರಾಮಾಯಣಂ ಅಥವಾ ಶ್ರೀ ರಾಮಚರಿತ ಮಾನಸ ಮತ್ತು (2) ಕರ್ನಾಟಕ ಭಾರತ ಕಥಾ ಮಂಜರಿ,** ಲೇಖಕರು : ಮೈ. ಶೇ. ಅನಂತಪದ್ಮನಾಭರಾವ್, ಪ್ರಕಾಶಕರು: ಎಂ. ಎ. ಜಯರಾಮ್ ರಾವ್, ನಂ. 2742, 12ನೇ ಮುಖ್ಯ ರಸ್ತೆ 'ಇ' ವಿಭಾಗ ಎರಡನೇ ಹಂತ, ರಾಜಾಜಿನಗರ, ಬೆಂಗಳೂರು-560 010. ದ್ವಿತೀಯ ಮುದ್ರಣ : 2004. ಬೆಲೆ : 100-00 ರೂ.

**3) ನಯನಸೇನ ಧರ್ಮಾಮೃತ (ಗದ್ಯ ಕಥನ)**-ಡಾ|| ಪಿ. ವಿ. ನಾರಾಯಣ. ವಸಂತ ಪ್ರಕಾಶನ, ನಂ. 10, ತುಳಸಿವನ, ಬಳೇಪೇಟೆ, ಬೆಂಗಳೂರು-560 053, 2004. ಬೆಲೆ:160-00 ರೂ.

**4) ಎಪ್ಪತ್ತರ ವಯಸ್ಸು ಇಪ್ಪತ್ತರ ಮನಸ್ಸು :** ವಿವಿಧ ಲೇಖಕಿಯರ ಆತ್ಮವೃತ್ತಾಂತಗಳು, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು-560 018. ಲೇಖಕರು : ಇಂದಿರಾ ಶಿವಣ್ಣ, ಡಾ|| ಕೆ. ಆರ್. ಸಂಧ್ಯಾರೆಡ್ಡಿ. ವರ್ಷ : 2005, ಬೆಲೆ : ರೂ. 125/

**5) ರಾಮಾಯಣ ಪರಂಪರೆಯಲ್ಲಿ ಕನ್ನಡ ರಾಮಾಯಣಗಳು :** ಒಂದು ತೌಲನಿಕ ಅಧ್ಯಯನ: ಡಾ|| ಎಸ್. ವಿ. ಪ್ರಭಾವತಿ. ಸುಮುಖ ಪ್ರಕಾಶನ : ನಂ. 174 ಇ/28, 1ನೇ ಮಹಡಿ, 1ನೇ ಮುಖ್ಯರಸ್ತೆ ವಿದ್ಯಾರಣ್ಯನಗರ, ಮಾಗಡಿ ರಸ್ತೆ, ಟೋಲ್ ಗೇಟ್, ಬೆಂಗಳೂರು-560023, 2005, ಬೆಲೆ : ರೂ. 175-00.

**6) ಶ್ರೀಮದ್ ಭಾಗವತ್ (ಶ್ರೀಕೃಷ್ಣ ಲೀಲ) :** ಅರಳಿ ಸತ್ಯನಾರಾಯಣಶೆಟ್ಟಿ, ಪ್ರಕಾಶಕರು, ಶ್ರೀಮತಿ ಅರಳಿಹಳ್ಳಿ ಭಾಗ್ಯಲಕ್ಷ್ಮಿ 'ಶ್ರೀರಾಮ ಗೌರಿ ಪೂಜಾ' ಶ್ರೀರಾಮ ಟ್ರೇಡರ್ಸ್, ಬಸ್‌ಸ್ಟ್ಯಾಂಡ್ ಹತ್ತಿರ ಹೊಸಪೇಟೆ-583 201, 2004.

**7) ವೇದನಾ-ನಿವೇದನಾ :** (ಮುಕ್ತಕಗಳ ಸಂಕಲನ) ಭಾರತಿ, ನವನೀತ ಪ್ರಕಾಶನ, ನಂ.75, ಡಾ|| ಅ.ನ.ಕೃ. ರಸ್ತೆ, ವಿಶ್ವೇಶ್ವರಪುರ, ಬೆಂಗಳೂರು-560 004. 2004. 10-00ರೂ.

ಕುವೆಂಪು ಶತಮಾನೋತ್ಸವದ ಅಂಗವಾಗಿ ವಿಶಿಷ್ಟ ಕಾರ್ಯಕ್ರಮ :

"ಕವೆಂಪು ಕಾವ್ಯ ನಮನ" ಕುವೆಂಪು ಕುರಿತ ವಿಶೇಷ ಕವಿಗೋಷ್ಠಿ

ನಾಡಿನಾದ್ಯಂತ ವರ್ಷವಿಡೀ ಕನ್ನಡದ ಹೆಮ್ಮೆಯ ರಾಷ್ಟ್ರಕವಿ ಕುವೆಂಪು ಅವರ ಶತಮಾನೋತ್ಸವವನ್ನು ಹಲವರು ಹಲವು ರೀತಿಯಲ್ಲಿ ಆಚರಿಸಿದರು. ಆದರೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ನಡೆಸಿದ ಕಾರ್ಯಕ್ರಮ ಅವೆಲ್ಲಕ್ಕಿಂತ ಭಿನ್ನವಾಗಿ ಮತ್ತು ವಿಶಿಷ್ಟವಾಗಿತ್ತು. ಮೂಲತಃ ಕವಿಗಳಾಗಿದ್ದ ಕುವೆಂಪು ಅವರು ಕನ್ನಡದ ಕಾವ್ಯ ಬೆಳವಣಿಗೆಗೆ ತಮ್ಮದೇ ಆದ

ವಿಶಿಷ್ಟ ಕೊಡುಗೆ ನೀಡಿದ್ದಾರೆ. ಮುಂದಿನ ಕವಿಗಳಿಗೆ ಮಾರ್ಗದರ್ಶಕರಾಗಿದ್ದಾರೆ. ಅನೇಕ ಕವಿಗಳ ಹುಟ್ಟಿಗೆ ಕಾರಣರಾಗಿದ್ದಾರೆ. ಹೀಗಾಗಿ ಕುವೆಂಪು ಅವರ ಕಾವ್ಯದ ಪ್ರಭಾವ ಬಹಳ ಗಾಢವಾದದ್ದು. ಇದನ್ನು ಕನ್ನಡ ಕವಿಗಳು ಕಾವ್ಯ ಮಾಧ್ಯಮದ ಮೂಲಕವೂ ದಾಖಲಿಸಿದ್ದಾರೆ. ಅಷ್ಟೇ ಅಲ್ಲ ಈಗಲೂ ದಾಖಲಿಸುತ್ತಿದ್ದಾರೆ ಕೂಡ.

ಪ್ರೊ॥ ಡಿ. ಲಿಂಗಯ್ಯ, ಪ್ರೊ॥ ಎಂ. ಶಿವರಾಮಯ್ಯ, ಡಾ॥ ನಲ್ಲೂರು ಪ್ರಸಾದ್, ಪ್ರೊ॥ ಎಸ್. ವಿ. ಪ್ರಭಾವತಿ, ಶ್ರೀ ಬೇಡರೆಡ್ಡಿಹಳ್ಳಿ ಪಂಪಣ್ಣ, ಪ್ರೊ॥ ಭೈರಮಂಗಲ ರಾಮೇಗೌಡ, ಶ್ರೀಮತಿ ಎಚ್. ಎಲ್. ಪುಷ್ಪ, ಪ್ರೊ॥ ನಾ. ಗೀತಾಚಾರ್ಯ, ಶ್ರೀ ಆರ್. ಜಿ ಹಳ್ಳಿ ನಾಗರಾಜ್, ಶ್ರೀ ಎಲ್. ಎನ್. ಮುಕುಂದರಾಜ್, ಎಂ. ಭೈರೇಗೌಡ, ಎಂ. ಕೆ. ತಿಮ್ಮೇಶಪ್ರಭು, ಎ. ಆರ್. ನಾರಾಯಣಘಟ್ಟ, ಡಾ॥ ಕೆ. ಬಿ. ಲೋಕೇಶ್ವರಪ್ಪ, ಶ್ರೀಮತಿ ಅನಸೂಯ ಹೆಸರಘಟ್ಟ ಮತ್ತು ಶ್ರೀ ಕೆ. ಬಸವರಾಜಪ್ಪ ಅವರುಗಳು ತಮ್ಮ ವಿಭಿನ್ನ ವಸ್ತುಗಳ ಕವಿತೆಗಳ ಮೂಲಕ ಕುವೆಂಪು ಅವರಿಗೆ ಅರ್ಥಪೂರ್ಣವಾದ ಕಾವ್ಯ ನಮನವನ್ನು ಸಲ್ಲಿಸಿದರು.

ಈ ಶತಮಾನೋತ್ಸವ ಆಚರಣೆ ಸಂದರ್ಭದಲ್ಲಿ 'ಕವಿ' ಕುವೆಂಪು ಅವರಿಗೆ ಕಾವ್ಯದ ಮೂಲಕವೇ ನಮನ ಸಲ್ಲಿಸುವ ವಿಶಿಷ್ಟ ವಿನೂತನ ಕಾರ್ಯಕ್ರಮವನ್ನು ಬಿ.ಎಂ.ಶ್ರೀ. ಪ್ರತಿಷ್ಠಾನ ಮಾಡಿದೆ. ಅದೇ 'ಕುವೆಂಪು ಕಾವ್ಯ ನಮನ' ಎಂಬ ಹೆಸರಿನ ವಿಶೇಷ ಕವಿಗೋಷ್ಠಿ. ಬಿ.ಎಂ.ಶ್ರೀ. ಕಲಾಭವನದ ಎಂ.ವಿ.ಸೀ. ಸಭಾಂಗಣದಲ್ಲಿ ಇತ್ತೀಚೆಗೆ ನಡೆದ ಕವಿಗೋಷ್ಠಿಯಲ್ಲಿ ಭಾಗವಹಿಸಿದ್ದ ಕವಿಗಳು ತಮ್ಮ ಕವಿತೆಗಳ ಮೂಲಕವೇ ಧ್ವನಿ ಪೂರ್ಣವಾಗಿ ನಮನ ಸಲ್ಲಿಸಿದ್ದಾರೆ ಹಾಗೆಂದು ಇದು ಕೇವಲ ಹಾಡಿ ಹೊಗಳುವ ಸ್ತುತಿ ಗೀತೆಗಳಾಗಿರಲಿಲ್ಲ. ತಮ್ಮ ವಿಶಿಷ್ಟ ಪ್ರತಿಭೆ. ಧ್ವನಿ ಮತ್ತು ರೂಪಕಗಳ ಮೂಲಕ ಕುವೆಂಪು ವ್ಯಕ್ತಿತ್ವ-ಸಾಹಿತ್ಯವನ್ನು ಕಡೆದಿಡುತ್ತಲೇ ಕಾವ್ಯಲೋಕದ ವಿಸ್ಮಯಗಳನ್ನು ತೆರೆದಿಟ್ಟರು ಹಾಗೂ ಇದರ ಹೊಸ ತಲೆಮಾರಿನ ಕವಿಗಳನ್ನೇ ಹೆಚ್ಚಾಗಿ ಒಳಗೊಂಡಿತ್ತು ಎಂದು ಈ ಕವಿಗೋಷ್ಠಿಯ ಅಧ್ಯಕ್ಷತೆಯನ್ನು ವಹಿಸಿದ್ದ ಮಾರ್ಕ ಂಡಪುರಂ ಶ್ರೀನಿವಾಸ್ ಅವರು ಗುರುತಿಸಿದುದು ಈ ಕವಿಗೋಷ್ಠಿಯ ವೈಶಿಷ್ಟತೆಗೆ ಸಾಕ್ಷಿಯಾಗಿತ್ತು.

ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿರುವ ಪ್ರತಿ ತಿಂಗಳ ಸಾಹಿತ್ಯ ವೇದಿಕೆಯಾದ ಸಹೃದಯಗೋಷ್ಠಿ ಆಯೋಜಿಸಿದ್ದ ಈ ವಿಭಿನ್ನ ಕಾರ್ಯಕ್ರಮ ಕುವೆಂಪು ಶತಮಾನೋತ್ಸವ ಕಾರ್ಯಕ್ರಮಗಳಲ್ಲೆಲ್ಲ ಹೊಸರೀತಿಯ ಕಾರ್ಯಕ್ರಮವಾಗಿ ಗಮನ ಸೆಳೆಯಿತು.

* * * *

# ವಸ್ತು ಸಂಗ್ರಹ

## (ಅ) ಸನ್ಮಾನ ಮತ್ತು ಅಭಿನಂದನ ಸಂಪುಟಗಳು :

**1) ಎನ್. ಬಸವರಾಧ್ಯ ಸನ್ಮಾನ :** ಬಿ.ಎಂ.ಶ್ರೀ. ಪ್ರತಿಷ್ಠಾನ ಮತ್ತು ಕನ್ನಡ ಸಾಹಿತ್ಯ ಪರಿಷತ್ತುಗಳ ಮಾಜಿ ಅಧ್ಯಕ್ಷರೂ ಹಿರಿಯ ವಿದ್ವಾಂಸರೂ ಆದ ಎನ್. ಬಸವಾರಾಧ್ಯರಿಗೆ 80 ವರ್ಷ ತುಂಬಿದ ಸಂದರ್ಭದಲ್ಲಿ ಅಭಿನಂದನ ಸಮಿತಿ 13-3-2005 ರಂದು ರವೀಂದ್ರ ಕಲಾಕ್ಷೇತ್ರದಲ್ಲಿ ಅಭಿನಂದನಾ ಸಮಾರಂಭವನ್ನು ಏರ್ಪಡಿಸಿತ್ತು. ಕೇಂದ್ರಮಂತ್ರಿಗಳಾದ ಶ್ರೀ ಎಂ. ವಿ. ರಾಜಶೇಕರನ್ ಅವರು ಬಸವಾರಾಧ್ಯರಿಗೆ ಗೌರವಾರ್ಪಣೆ ಮಾಡಿದರು. ಶಿಕ್ಷಣ ತಜ್ಞರಾದ ಶ್ರೀ ರೋಹಿಡೇಕರ್, ಸಾಹಿತಿ ಡಾ।। ವಿಜಯ ಸುಬ್ಬರಾಜ್ ಶಾಸಕ ಶ್ರೀ ವಿ. ಸೋಮಣ್ಣ ಅವರುಗಳು ಅಭಿನಂದನ ನುಡಿಗಳನ್ನಾಡಿ ಬಸವಾರಾಧ್ಯರ ಹಿರಿಯ-ಗರಿಮೆಗಳನ್ನು ದಾಖಲಿಸಿದರು. ನಿವೃತ್ತ ಉಪಕುಲಪತಿಗಳೂ, ಖ್ಯಾತ ಸಾಹಿತಿಗಳೂ ಆದ ಡಾ।। ದೇ. ಜವರೇಗೌಡ ಅವರು 'ಆರಾಧ್ಯ ಸಂಪದ'ವನ್ನು ಇನ್ನೊಬ್ಬ ಮಾಜಿ ಕುಲಪತಿಗಳೂ ಖ್ಯಾತ ಸಂಶೋಧಕರು ಆದ ಡಾ।। ಎಂ. ಎಂಯ ಕಲುಬುರ್ಗಿಯವರ 'ಆರಾಧ್ಯ ಸಿರಿ' ಅಭಿನಂದನ ಗ್ರಂಥಗಳನ್ನು ಬಿಡುಗಡೆ ಮಾಡಿದರು. ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಎಂ. ವೀರಪ್ಪ ಮೊಯಿಲಿಯವರ ಅಧ್ಯಕ್ಷತೆಯಲ್ಲಿ ನಡೆದ ಈ ಅಭಿನಂದನ ಸಮಾರಂಭ ಅದ್ದೂರಿಯಾಗಿ ಮತ್ತು ಅರ್ಥಪೂರ್ಣವಾಗಿ ನಡಿಯಿತು. ಅಭಿನಂದನ ಸಮಿತಿಯ ಅಧ್ಯಕ್ಷರಾದ ಪ್ರೊ।। ಎಚ್. ಆರ್. ದಾಸೇಗೌಡ, ಪ್ರಧಾನ ಕಾರ್ಯದರ್ಶಿಗಳಾದ ಎಸ್. ಈಶ್ವರದೇವರು, ಕೋಶಾಧ್ಯಕ್ಷರಾದ ಯಜಮಾನ್ ಶ್ರೀಕಂಠಪ್ಪ, ಸಂಪಾದಕರುಗಳಾದ ಡಾ।। ಎಸ್. ವಿದ್ಯಾಶಂಕರ್ ಹಾಗೂ ಸಮಿತಿ ಕಾರ್ಯದರ್ಶಿಗಳು, ಸದಸ್ಯರು ಈ ಸಮಾರಂಭದ ಯಶಸ್ವಿನ ಹಿಂದೆ ಇದ್ದು ಅಭಿನಂದನಾರ್ಹರಾಗಿದ್ದಾರೆ.

ಅಭಿನಂದನ ಸಮಿತಿಯು ಪ್ರಕಟಿಸಿರುವ 'ಆರಾಧ್ಯ ಸಂಪದ' 1054ಪುಟಗಳ ಕ್ರೌನ್ 4/1 ಆಕಾರದ ಬೃಹತ್ ಸಂಪುಟ (ಬೆಲೆ ರೂ. 400/-) ಇದು ಬಸವಾರಾಧ್ಯರ ಸಮಗ್ರ ಲೇಖನಗಳ ಸಂಪುಟ, ಸಂಪಾದಕೀಯಗಳು, ನಿಘಂಟು, ಗ್ರಂಥ ಸಂಪಾದನೆ, ಸಾಹಿತ್ಯ ಚರಿತ್ರೆ, ಮುನ್ನುಡಿಗಳು, ವ್ಯಕ್ತಿಚಿತ್ರ, ಸಂಕೀರ್ಣ ವಿಭಾಗಗಳಲ್ಲಿ ಒಟ್ಟು198 ವಿದ್ವತ್ತಪೂರ್ಣಲೇಖನಗಳಿವೆ. ಕನ್ನಡ ಸಾಹಿತ್ಯದ ಇತಿಹಾಸಕ್ಕೆ ಇದೊಂದು ಅತ್ಯಮೂಲ್ಯ ಆಕರ ಗ್ರಂಥವಾಗಲಿದೆ. ಇನ್ನೊಂದು ಗ್ರಂಥ 'ಆರಾಧ್ಯ ಸಿರಿ' 264 ಪುಟಗಳಲ್ಲಿ ಕ್ರೌನ್ 1/4 ಆಕಾರದಲ್ಲಿರುವ ಅಭಿನಂದನ ಸಂಪುಟ (ಬೆಲೆ ರೂ. 100/-)78 ಲೇಖನಗಳಲ್ಲಿ ನಾಡಿನ ವಿವಿಧ ಕ್ಷೇತ್ರದ ಗಣ್ಯರು, ಸಾಹಿತಿಗಳು, ಶಿಷ್ಯರು, ಅಭಿಮಾನಿಗಳು. ಆರಾಧ್ಯರನ್ನು ಕುರಿತು ಬರೆದಿದ್ದಾರೆ. ಆರಾಧ್ಯರೇ ಕೊನೆಯಲ್ಲಿ ತಮ್ಮ ಬದುಕಿನ ಹೂದೋಟವನ್ನು ದಾಖಲಿಸಿದ್ದಾರೆ. ಈ ಎರಡೂ ಸಂಪುಟಗಳು ಅತ್ಯಂತ ಸುಂದರವಾದ ಮುಖಪುಟ ಮತ್ತು ಮುದ್ರಣದಿಂದ ಮನಸೆಳೆಯುತ್ತವೆ.

**2) ಗಂಧವ್ರತ : ಎಚ್. ಎಸ್. ವಿ. (60)ರ ಅಭಿನಂದನೆ**

ಡಾ।। ಎಚ್. ಎಸ್. ವೆಂಕಟೇಶಮೂರ್ತಿಯವರು ಕನ್ನಡ ಕಾವ್ಯಲೋಕ ಕಂಡ ಅತ್ಯಂತ

ಜನಪ್ರಿಯ ಕವಿಗಳಲ್ಲಿ ಇತ್ತೀಚಿನವರು. ಕವಿಯಾಗಿ, ನಾಟಕಕಾರರಾಗಿ, ಮಕ್ಕಳ ಸಾಹಿತಿಗಳಾಗಿ ಹೆಸರು ಮಾಡಿರುವ ಎಚ್. ಎಸ್. ವಿ. ಅವರಿಗೆ ಅವರ ಅಭಿಮಾನಿಗಳು, ಶಿಷ್ಯರನ್ನೊಳಗೊಂಡ ಅಭಿನಂದನ ಸಮಿತಿ 60ನೇ ವರ್ಷದ ಹುಟ್ಟುಹಬ್ಬದಂದು ಅರ್ಪಿಸಿದ ಅಭಿನಂದನ ಗ್ರಂಥ 'ಗಂಧವ್ರತ'. ಈ ಶೀರ್ಷಿಕೆ ಎಚ್. ಎಸ್. ವಿ. ಅವರದೇ ಒಂದು ಸಾನೆಟ್ಟಿನ ಹೆಸರು. ನಡುಮನೆಯ ಹಂಗಿಲ್ಲದೆ ಎಲ್ಲೋ ಒಂದು ಮೂಲೆಯಲ್ಲಿ 'ಎದೆಯಲೊಂದು ಕಿಡಿಗೆಂಡ ಹಿಡಿದು' ಒಂದೆ ಹದದಲ್ಲಿ ವ್ರತದಂತೆ ಉರಿಯುತ್ತ ತನ್ನ ಗಂಧದಿಂದ ಸುತ್ತಲಿನ ಆವರಣವನ್ನು ಸುಗಂಧಿತವನ್ನಾಗಿ ಮಾಡುವ ಊದುಬತ್ತಿಯ ವಿನಯವಂತಿಕೆಯನ್ನು ತನ್ನ ಬದುಕಿನ ಪ್ರತೀಕವೆಂಬಂತೆ ಚಿತ್ರಿಸುವ ಈ ಕವಿತೆ ಥಟ್ಟನೆ ಡಿ.ವಿ.ಜಿಯವರ ಅತ್ಯಂತ ಜನಪ್ರಿಯವಾದ 'ವನಸುಮ' ಎಂಬ ಕವಿತೆಯನ್ನು ಸಹಜವಾಗಿ ನೆನಪಿಗೆ ತರುತ್ತದೆ.ಈ ಬಗೆಯ ವಿನಯವಂತಿಕೆಯುಳ್ಳ ಸೃಜನಶೀಲ ಮನಸ್ಸುಗಳೇ ಸದ್ದು-ಗದ್ದಲವಿಲ್ಲದೆ ದೊಡ್ಡದನ್ನೂ ಸಾಧಿಸಬಲ್ಲವು ಎಂಬ ಈ ಗ್ರಂಥದ ಪ್ರಧಾನ ಸಂಪಾದಕರಾಗಿರುವ ಮತ್ತು ಅಭಿನಂದನೆ ಸಮಿತಿಯ ಅಧ್ಯಕ್ಷರೂ ಆಗಿರುವ ಡಾ|| ಜಿ.ಎಸ್. ಶಿವರುದ್ರಪ್ಪನವರ ಮಾತು ಈ ಗ್ರಂಥಕ್ಕೆ ಸೂಕ್ತವಾಗಿ ಅನ್ವಯವಾಗುತ್ತದೆ.

ಇತ್ತೀಚೆಗೆ ನಡೆದ ಅಭಿನಂದನ ಸಮಾರಂಭದಲ್ಲಿ ಬಿಡುಗಡೆಯಾದ ಈ ಗ್ರಂಥವನ್ನು ಮಲ್ಲಾಡಿಹಳ್ಳಿಯ 'ಸಂವಾದ' ಪ್ರಕಟಿಸಿದೆ. ಡಾ|| ನರಹಳ್ಳಿ ಬಾಲಸುಬ್ರಹ್ಮಣ್ಯ, ರಾಘವೇಂದ್ರ ಪಾಟೀಲ, ಬಿ. ಆರ್. ಲಕ್ಷ್ಮಣರಾವ್, ಚಂದ್ರಶೇಖರ ತಾಳ್ಯ, ಡಾ|| ಶ್ರೀರಾಮ ಭಟ್ಟ, ಸಂಪಾದಕ ಮಂಡಲಿಯಲ್ಲಿದ್ದಾರೆ. ಶ್ರೀ ಎಚ್. ವಿ. ರವೀಶ ಸಂಚಾಲಕರಾಗಿರುವ ಈ ಸಮಿತಿಯು ಸಾರ್ಥಕವಾದ ಕೆಲಸವನ್ನು ಮಾಡಿದೆ. ಕನ್ನಡದ ಒಬ್ಬ ದೊಡ್ಡ ಕವಿಗೆ ದೊಡ್ಡ ಪ್ರಮಾಣದಲ್ಲೇ ಅಭಿನಂದನ ಗ್ರಂಥ ಸಮರ್ಪಿಸಿ ಕಾವ್ಯ ಪ್ರೀತಿಯನ್ನು ಸಾಬೀತು ಪಡಿಸಿದೆ.

ಡೆಮಿ ಅಷ್ಟದಳಾಕಾರದ ಸುಂದರ ಕಾಗದದಲ್ಲಿ 500 ಪುಟಗಳಲ್ಲಿ ಅತ್ಯಂತ ಉತ್ತಮ ಮುಖಪುಟದೊಂದಿಗೆ ಸೊಗಸಾಗಿ ಹೊರಬಂದಿರುವ ಈ ಗ್ರಂಥದಲ್ಲಿ ಏಳು ಭಾಗಗಳಿವೆ. ಸ್ಪಂಧನ, ಕಥನ, ಪರಂಪಗೆ, ಪ್ರತಿಭೆ, ಮುನ್ನುಡಿಗಳು, ಕೃತಿಗಳನ್ನು ಕುರಿತು, ಬಿಡಿಕವಿತೆಗಳನ್ನು ಕುರಿತು ಮತ್ತು ಸತ್ಯಗಳು ಎಂಬ ಶೀರ್ಷಿಕೆಗಳಲ್ಲಿ ಈ ಏಳು ವಿಭಾಗಗಳಲ್ಲಿ ಎಚ್. ಎಸ್. ವಿ. ಅವರನ್ನು ಮತ್ತು ಸಾಹಿತ್ಯವನ್ನೂ ಅತ್ಯಂತ ಸಮರ್ಥವಾದ ರೀತಿಯಲ್ಲಿ ನಾಡಿನ ಹಿರಿಯ ಕಿರಿಯ ಲೇಖಕರು ದಾಖಲಿಸಿದ್ದಾರೆ.

### 3) 'ಶಬ್ದಸಾಗರ' ಪ್ರೊ|| ಜಿ. ವೆಂಕಟಸುಬ್ಬಯ್ಯ ಗೌರವ ಗ್ರಂಥ

ಕನ್ನಡ ಸಾರಸ್ವತ ಲೋಕದ ಹಿರಿಯ ಸಾಹಿತಿಗಳೂ ವಿದ್ವಾಂಸರೂ ನಿಘಂಟಿನ ತಜ್ಞರೂ ಆದ ಪ್ರೊ|| ಜಿ. ವೆಂಕಟಸುಬ್ಬಯ್ಯನವರಿಗೆ ಅವರ 90ನೇ ವರ್ಷದ ಸಂದರ್ಭದಲ್ಲಿ ಸಮರ್ಪಿಸಿದ ಗೌರವ ಗ್ರಂಥ 'ಶಬ್ದಗೌರಿ.' ಸುಂದರ ಪ್ರಕಾಶನದ ಶ್ರೀಸಾಗರ ಸುಂದರ್ ಅವರ ಸಾಹಸದ ಫಲ ಈ ಅಭಿನಂದನ ಗ್ರಂಥ. ಅಭಿನಂದನ ಸಮಿತಿಯನ್ನು ರೂಪಿಸದೆ ಹಣಕಾಸಿನ ಸಂಗ್ರಹವಿಲ್ಲದೆ ಏಕ ವ್ಯಕ್ತಿ ಸಾಹಸವಾಗಿ ಈ ಅಭಿನಂದನ ಗ್ರಂಥಗಳನ್ನು ಪ್ರಕಟಿಸುವ ಅಪರೂಪದ ಸಾಹಸಿಗಳಾಗಿ ಶ್ರೀ ಗೌರಿಸುಂದರ್ ಈಚೆಗೆ ಕಾಣಿಸಿಕೊಂಡಿದ್ದಾರೆ. ಈ ಗ್ರಂಥವನ್ನು ಹಂಪಿ

ಕನ್ನಡ ವಿಶ್ವವಿದ್ಯಾಲಯದ ಪ್ರಧ್ಯಾಪಕರೂ, ಸಾಹಿತಿಗಳೂ, ಶ್ರೇಷ್ಠ ಚಿಂತಕರೂ ಆದ ಪ್ರೊ॥ ಮಲ್ಲೇಪುರಂ ಜಿ. ವೆಂಕಟೇಶ್ ಅವರು ಸಂಪಾದಿಸಿದ್ದಾರೆ.

ಡೆಮಿ ಅಷ್ಟದಳಾಕಾರದಲ್ಲಿ 384 ಪುಟಗಳಲ್ಲಿರುವ ಈ ಅಭಿನಂದ ಗ್ರಂಥದಲ್ಲಿ ಮೂರು ಭಾಗಗಳಿವೆ. 'ನುಡಿಗೌರವ', ನುಡಿ 'ಸಂವಾದ' ಮತ್ತು 'ನುಡಿಪೂಜೆ' ಎಂಬ ಹೆಸರಿನಲ್ಲಿರುವ ಈ ಭಾಗಗಳಲ್ಲಿ ನಾಡಿನ ಹಿರಿಯ ಕಿರಿಯ ಸಾಹಿತಿಗಳು, ಗಣ್ಯರು, ಶಿಷ್ಯರು, ಅಭಿಮಾನಿಗಳು ಪ್ರೊ॥ ಜಿ. ವಿ. ಅವರನ್ನು ತುಂಬು ಹೃದಯದಿಂದ ಸ್ಮರಿಸಿದ್ದಾರೆ. ಅಪಾರ ಶಿಷ್ಯರನ್ನು, ಅಭಿಮಾನಿಗಳನ್ನು ಹೊಂದಿರುವ ಪ್ರೊ॥ ಜಿ. ವಿ. ಅವರ ವ್ಯಕ್ತಿತ್ವ ಬಹುಮುಖಿಯಾದದ್ದು, ಪ್ರಾಚೀನ ಸಾಹಿತ್ಯದಲ್ಲಿ ಹೇಗೋ ಹಾಗೆಯೇ ಆಧುನಿಕ ಸಾಹಿತ್ಯದಲ್ಲಿಯೂ ಪರಿಣತಿ, ಮತ್ತು ಖಚಿತತೆಯನ್ನು ಹೊಂದಿರುವ ಪ್ರೊ॥ ಜಿ. ವಿ. ಅವರು ವಾಮನರೂಪದಲ್ಲಿರುವ ತ್ರಿವಿಕ್ರಮರೆಂದರೆ ಅತಿಶಯೋಕ್ತಿಯಲ್ಲ. ಕಿರಿಯರನ್ನು ಅವರ ಸಾಧನೆ, ಸಿದ್ಧಿ, ಪ್ರತಿಭೆಗಳ ಮೂಲಕ ಗುರುತಿಸಿ, ಪ್ರೋತ್ಸಾಹಿಸಿ, ಗೌರವಿಸುವ ಶ್ರೀಮಂತಿಕೆಯಿರುವ ಪ್ರೊ॥ ಜಿ. ವಿ. ಅವರು ನಮ್ಮ ಕಾಲದ ಅಪರೂಪದ ವಿದ್ವಾಂಸರಾಗಿದ್ದಾರೆ. 'ಇಗೋ ಕನ್ನಡ'ದ ಮೂಲಕ ಕನ್ನಡ ಭಾಷೆ-ಸಂಸ್ಕೃತಿಯ ಕ್ರಾಂತಿಯನ್ನೇ ಮಾಡಿರುವ ಜಿ.ವಿ. ಅವರು ಸಾಮಾಜಿಕ ನಿಘಂಟಿನ ಸೃಷ್ಟಿಕರ್ತರು. 'ಶಬ್ದಸಾಗರ' ಹೆಸರು ಅವರ ಕಾಯಕಕ್ಕೆ ಪಾಂಡಿತ್ಯಕ್ಕೆ ಹಿಡಿದ ಕನ್ನಡಿಯಾಗಿ ಸಾಂಕೇತಿಕವಾಗಿದೆ. ಗ್ರಂಥದ ಆರಂಭದಲ್ಲಿರುವ ಕ. ವೆಂ. ರಾಜಗೋಪಾಲ್ ಮತ್ತು ಮಹಾಬಲಮೂರ್ತಿ ಕೊಡ್ಲೆಕೆರ ಅವರ ಕವನಗಳು ಗ್ರಂಥಕ್ಕೆ ಶೋಭೆ ತಂದಿವೆ.

**4) ಎಂ. ವಿ. ಸುಬ್ಬರಾಯರಿಗೆ ಅಭಿನಂದನೆ :**

ಕನ್ನಡ ನಾಡು, ನುಡಿ, ಸಾಹಿತ್ಯ, ಸಂಸ್ಕೃತಿಗಳು ನಾಡಿನ ಜನತೆಯ ನೆನಪಿನ ಅಂಗಳದಿಂದ ಮರೆಯಾಗದಿರುವಂತೆ, ಕಳೆದ ಸುಮಾರು ಅರ್ಧ ಶತಮಾನಕ್ಕೂ ಹೆಚ್ಚು ಕಾಲದಿಂದ ದುಡಿದು ಮಾತ್ರವಲ್ಲ, ಇಂದಿಗೂ ದುಡಿಯುತ್ತಿರುವ 82 ವರ್ಷಗಳ ಯುವಕ ಶ್ರೀ ಎಂ. ವಿ. ಸುಬ್ಬರಾಯರು, ತಮ್ಮ ಇಡೀ ಬದುಕನ್ನೇ ಇದಕ್ಕಾಗಿ ಸಮರ್ಪಿಸಿಕೊಂಡವರು. ಕರ್ನಾಟಕ ಕುಲಪುರೋಹಿತ ಆಲೂರು ವೆಂಕಟರಾಯರು, ಅ.ನ.ಕೃ., ತ.ರಾ.ಸು., ವೀರಕೇಸರಿ ಸೀತಾರಾಮ ಶಾಸ್ತ್ರಿಗಳು, ತಿರುಮಲೆ ತಾತಾಚಾರ್ಯ ಶರ್ಮರು, ಬಿ. ಶಿವಮೂರ್ತಿ ಶಾಸ್ತ್ರಿಗಳು, ಸಿದ್ಧವ್ವನಹಳ್ಳಿ ನಿಜಲಿಂಗಪ್ಪನವರು, ಕಡಿದಾಳು ಮಂಜಪ್ಪನವರು, ಕೆಂಗಲ್ ಹನುಮಂತಯ್ಯನವರು, ವೀರೇಂದ್ರ ಪಾಟೀಲರು ಮುಂತಾದವರ ಒಡನಾಟದಲ್ಲಿದ್ದು, ಕನ್ನಡ ನಾಡು, ನುಡಿಗಾಗಿ ಕೆಲಸ ಮಾಡಿದ ಶ್ರೀ ಸುಬ್ಬರಾಯರನ್ನು ಇದುವರೆಗೆ ಜನತೆ ಸಾರ್ವಜನಿಕವಾಗಿ ಗುರುತಿಸಿರಲಿಲ್ಲ. ಈ ಎಲ್ಲದರ ಹಿನ್ನೆಲೆಯಲ್ಲಿ ಇಂದಿನ ರಂಗಭೂಮಿಯ ಹಿರಿಯ ಚೇತನ ಡಾ॥ ಮಾಸ್ಟರ್ ಹಿರಣ್ಣಯ್ಯನವರ ಅಧ್ಯಕ್ಷತೆಯಲ್ಲಿ ಸನ್ಮಾನ ಸಮಿತಿಯೊಂದನ್ನು ರಚಿಸಿ ದಿನಾಂಕ : 24-11-2004 ರಂದು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಸುಬ್ಬರಾಯರನ್ನು ಸನ್ಮಾನಿಸಿ ಗೌರವಿಸಲಾಯಿತು. ಆ ಸಮಯದಲ್ಲಿ 'ಸುಕೃತ' ಎಂಬ ಅಭಿನಂದನ ಗ್ರಂಥವನ್ನು ಹೊರತರಲಾಯಿತು. ಪುಸ್ತಕದ ಬೆಲೆ ರೂ. 100/ ಸೈಕಲ್ ಸುಬ್ಬರಾಯರು ಎಂದೇ ಎಲ್ಲರಿಂದಲೂ ಕರೆಸಿಕೊಳ್ಳುತ್ತಿದ್ದ ಕನ್ನಡದ ಕಾರ್ಯಕರ್ತರಾದ ಸುಬ್ಬರಾಯರು ನಿಜವಾದ ಕನ್ನಡದ ಕಟ್ಟಾಳುಗಳಾಗಿದ್ದಾರೆ.

## (೯) ಪ್ರಚಲಿತ ವಿಷಯಗಳು

### ೧) ಕನ್ನಡ ಶಾಸ್ತ್ರೀಯ ಭಾಷೆ : ವರದಿ ಸಲ್ಲಿಕೆ

ಎರಡು ಸಾವಿರ ವರ್ಷಗಳ ನಿರಂತರ ಬೆಳವಣಿಗೆಯನ್ನು ಹೊಂದಿರುವ ಕನ್ನಡ ಶಾಸ್ತ್ರೀಯ ಭಾಷೆ ಎನಿಸಿಕೊಳ್ಳಲು ಎಲ್ಲಾ ರೀತಿಯಲ್ಲಿಯೂ ಅರ್ಹ ಎಂದು ತಜ್ಞರ ಸಮಿತಿ ಪ್ರತಿಪಾದಿಸಿದೆ.

ಪ್ರಸಿದ್ಧ ಸಂಶೋಧಕ ಡಾ|| ಎಂ. ಚಿದಾನಂದಮೂರ್ತಿ, ಪ್ರೊ|| ಎಲ್. ಎಸ್. ಶೇಷಗಿರಿರಾವ್ ನೇತೃತ್ವದ ಸಮಿತಿ ಶಾಸ್ತ್ರೀಯ ಭಾಷೆ ಎನಿಸಿಕೊಳ್ಳಲು ಕನ್ನಡಕ್ಕಿರುವ ಅರ್ಹತೆ ಬಗ್ಗೆ ಸಮಗ್ರ ಅಧ್ಯಯನ ನಡೆಸಿ ಕೇಂದ್ರ ಸರ್ಕಾರಕ್ಕೆ ವರದಿ ಸಲ್ಲಿಸಿದೆ.

ಕೇಂದ್ರಯೋಜನಾ ಸಚಿವ ಎಂ. ಎ. ರಾಜಶೇರನ್ ಅವರ ಮೂಲಕ ಇಂದು ಈ ವರದಿ ಸಲ್ಲಿಸಲಾಗಿದ್ದು, ಕ್ರಿ.ಶ. 2-3ನೇ ಶತಮಾನಗಳ ಪೂರ್ವದ ಹಳೆಗನ್ನಡ ಮತ್ತು ಆಧುನಿಕ ಕನ್ನಡ ಇವುಗಳಲ್ಲಿ ಉಚ್ಚಾರ, ಪದ ಸಂಪತ್ತು ಸ್ವಲ್ಪ ಭಿನ್ನವಾಗಿದ್ದರೂ, ಕನ್ನಡಕ್ಕೆ ನಿರಂತರ ವಿಕಾಸಗೊಂಡ ಚರಿತ್ರೆಯಿದೆ ಎಂದು ಪ್ರತಿಪಾದಿಸಿದ್ದಾರೆ.

ಕನ್ನಡ ಭಾಷೆಯ ಮೊಟ್ಟಮೊದಲ ದಾಖಲೆ ಕ್ರಿ.ಪೂ. 230ರ ಅಶೋಕನ ಬ್ರಹ್ಮಗಿರಿ ಶಾಸನದಲ್ಲಿದೆ. ಕ್ರಿ.ಶ. 1-2ನೇ ಶತಮಾನದ ಗ್ರೀಕ್ ಪ್ರಹಸನಗಳಲ್ಲಿ ಕನ್ನಡ ಪದಗಳಿವೆ. ಕನ್ನಡ ಭಾಷೆಯ ಪೂರ್ಣ ಪ್ರಮಾಣದ ದಾಖಲೆ ಹಲ್ಮಿಡಿ ಶಾಸನವಾಗಿದ್ದು, ಅದರ ಕಾಲ ಕ್ರಿ.ಶ. 450. ಅಲ್ಲಿಂದ ಮುಂದೆ ನಿರಂತರವಾಗಿ ಕನ್ನಡ ಶಾಸನಗಳು ದೊರೆಯುತ್ತವೆ ಎಂದು ವರದಿಯಲ್ಲಿ ತಿಳಿಸಲಾಗಿದೆ.

ಕ್ರಿ.ಶ. 850ರ ಕವಿರಾಜಮಾರ್ಗವು ಲಭ್ಯವಾದ ಮೊಟ್ಟಮೊದಲ ಕನ್ನಡ ಕೃತಿ. ಅದು ಕಾವ್ಯಮೀಮಾಂಸೆಯ ಗ್ರಂಥವಾಗಿದ್ದು, ಅದರಲ್ಲಿ ಶ್ರೀ ವಿಜಯ, ಕವೀಶ್ವರ, ದುರ್ವಿನೀತ ಮೊದಲಾದ ಪದ್ಯ ಗದ್ಯ ಕವಿಗಳ ಹೆಸರುಗಳಿರುವುದರಿಂದ ಕನ್ನಡ ಸಾಹಿತ್ಯದ ಇತಿಹಾಸ ಕನಿಷ್ಠ 1200 ವರ್ಷಗಳಿಗಿಂತ ಹಿಂದಕ್ಕೆ ಹೋಗುತ್ತದೆ ಎಂದು ವಿವರಿಸಲಾಗಿದೆ.

ಹನ್ನೆರಡನೇ ಶತಮಾನದಲ್ಲಿ ಮೂಡಿ ಬಂದ ಕನ್ನಡ ವಚನ ಸಾಹಿತ್ಯ ಭಾಷೆ, ವಸ್ತು, ಶೈಲಿ ಭಾರತದಲ್ಲಿಯೇ ಅನನ್ಯವಾದದ್ದು. ಸಂಸ್ಕೃತ, ಪ್ರಾಕೃತ, ತಮಿಳು, ತೆಲುಗು, ಇತ್ಯಾದಿ ಯಾವುದೇ ಭಾಷಾ ಸಾಹಿತ್ಯದಿಂದಲೂ ಪ್ರಚೋದನೆಗೊಳ್ಳದೇ ಕನ್ನಡದ ಮಣ್ಣಿನಿಂದ ಮೂಡಿಬಂದ ಜನಸಾಮಾನ್ಯರ ಪ್ರತಿಭಟನಾತ್ಮಕ ಸಾಹಿತ್ಯವಾಗಿದೆ. ನೇಕಾರ, ಪುರೋಹಿ. ಅಂಬಿಗ, ಚಪ್ಪಲಿ ಹೊಲೆಯುವವ, ದನಾಗಾಹಿ ಇವರಲ್ಲದೇ ಸ್ತ್ರೀಯರೂ ಸಾಹಿತ್ಯ ರಚನೆ ಮಾಡಿದ್ದಾರೆ. ಈ ದೃಷ್ಟಿಯಿಂದ ಕನ್ನಡ ಸಾಹಿತ್ಯ ಪರಂಪರೆ ಮೌಲಿಕವಾದದ್ದು ಎಂದು ಪ್ರತಿಪಾದಿಲಾಗಿದೆ.

ಕೃಪೆ : ಉದಯವಾಣಿ (27-5-05)

ಕೇಂದ್ರ ಸರ್ಕಾರ ರೂಪಿಸಿರುವ ಶಾಸ್ತ್ರೀಯ ಭಾಷೆಯ ಮಾನದಂಡದಲ್ಲಿ (1) ಕನಿಷ್ಠ 1000 ವರ್ಷದ ಇತಿಹಾಸ ಇರಬೇಕು. (2) ಪ್ರಾಚೀನ ಭಾಷೆಗೂ ಆಧುನಿಕ ಭಾಷೆಗೂ

ವ್ಯತ್ಯಾಸವಿರಬೇಕು. (3) ಸ್ವತಂತ್ರ ಸಾಹಿತ್ಯದ ಅಸ್ತಿತ್ವವಿರಬೇಕು. ಎಂಬ ಮೂರೂ ನಿಯಮಗಳು ಕನ್ನಡಕ್ಕೆ ಅನ್ವಯವಾಗುತ್ತವೆ. ಈ ಮೂರು ಅಂಶಗಳಲ್ಲಿ ಕನ್ನಡ 2000ಕ್ಕೂ ಹೆಚ್ಚಿನ ವರ್ಷಗಳ ಪ್ರಾಚೀನತೆಯನ್ನು ಹೊಂದಿದೆ. ಸ್ವತಂತ್ರ ಸಾಹಿತ್ಯದಲ್ಲಿ ಮಾತ್ರ ಸಾವಿರ ವರ್ಷದ ಇತಿಹಾಸವಿದೆಯಾದರೂ ಇದು ಶಿಷ್ಟ ಸಾಹಿತ್ಯದ ಮಿತಿ. ಜಾನಪದ ಸಾಹಿತ್ಯವನ್ನು ಈ ನಿಯಮದಡಿ ನಾವು ತರುವುದಾದರೆ ಅದು ಎರಡು ಸಾವಿರಕ್ಕೂ ಹೆಚ್ಚಿನ ವರ್ಷಗಳ ಪ್ರಾಚೀನತೆಯನ್ನು ಪಡೆಯುತ್ತದೆ. ಮಲೆಮಹದೇಶ್ವರ ಕಾವ್ಯವಾಗಲಿ ಮಂಟೇಸ್ವಾಮಿ ಕಾವ್ಯವಾಗಲಿ ಕನ್ನಡದ ಪ್ರಾಚೀನ ಕಾವ್ಯ ಪರಂಪರೆಯ ಮಾದರಿಯಾಗಿ ಯಶಸ್ವಿಯಾಗಿ ನಿಲ್ಲಬಲ್ಲದು. ಇದಕ್ಕೆ ಅನ್ವಯಿಸುವ ಕಾವ್ಯ ಮೀಮಾಂಸೆ, ಛಂದಸ್ಸುಗಳು ಕನ್ನಡದ್ದೇ ಆಗಿದ್ದು ಕನ್ನಡ ಭಾಷೆಯ ಸ್ವತಂತ್ರ ಕಾವ್ಯ ರಚನೆಗಳೆನಿಸುತ್ತವೆ. ಈ ಬಗ್ಗೆ ವಿದ್ವಾಂಸರು ಗಮನಹರಿಸಬೇಕು. (ವ್ಯ. ಸಂ.)

## ೨) ಬಿ.ಎಂ.ಶ್ರೀ. ಮನೆ ಈಗ ಕಸದ ತೊಟ್ಟಿ

ಕನ್ನಡದ ಕಣ್ವ ಬಿ.ಎಂ.ಶ್ರೀಕಂಠಯ್ಯ ಅವರು ಹುಟ್ಟಿಬೆಳೆದ ಮನೆ ಈಗ ಕಸದ ತೊಟ್ಟಿಯಾಗಿ ಮಾರ್ಪಟ್ಟಿದ್ದು. ಗಿಡಗಂಟಿ, ಪಾರ್ಥೇನಿಯಂ ಸಸ್ಯ ಬೆಳೆದು ಹಂದಿನಾಯಿಗಳ ವಾಸಸ್ಥಳವಾಗಿದೆ.

ಸಂಪಿಗೆ ಗ್ರಾಮದಲ್ಲಿರುವ ಈ ಮನೆ ಶ್ರೀಕಂಠಯ್ಯನವರು ಹುಟ್ಟಿ ಬೆಳೆದು ಆಡಿದ ಸ್ಥಳ. ಕನ್ನಡ ಸಾಹಿತ್ಯಕ್ಕೆ ಬಿ.ಎಂ.ಶ್ರೀ. ಅವರಂಥವರನ್ನು ಕೊಡುಗೆ ನೀಡಿದ ಈ ಮನೆ ನಾಶವಾಗಬಾರದು ಮತ್ತು ಯಾರೊಬ್ಬರ ಸೊತ್ತಾಗಬಾರದು. ಅವರ ತಾಯಿಯ ಸಹೋದರ ಸಂಬಂಧಿ ಜೋಡಿದಾರ ಕೃಷ್ಣಮೂರ್ತಿ ಅವರು, ಮನೆಯನ್ನು ಸರ್ಕಾರಕ್ಕೆ ದಾನ ನೀಡಿದ್ದರು.

ಈ ಮನೆಯ ಜೀರ್ಣೋದ್ಧಾರ ಮಾಡಿ ಅಲ್ಲಿ ಗ್ರಂಥಾಲಯವನ್ನಾಗಲಿ ಅಥವ ಕನ್ನಡ ಭವನವನ್ನಾಗಲಿ ಕಟ್ಟಬೇಕೆಂದು ಸರ್ಕಾರಕ್ಕೆ ವಿನಂತಿಸಿದ್ದರು. ಅದರಂತೆ ಸರ್ಕಾರವೂ ಸಹ ಏಳೆಂಟು ವರ್ಷಗಳ ಹಿಂದೆಯೇ ಬಿ.ಎಂ.ಶ್ರೀ ಹೆಸರಿನಲ್ಲಿ ಭವನ ಕಟ್ಟಿ ಗ್ರಂಥಾಲಯ ನಿರ್ಮಿಸುವುದಾಗಿ ಘೋಷಿಸಿತ್ತು. ಸಂಸದರ ನಿಧಿಯಿಂದ ಅದಕ್ಕಾಗಿ 12 ಲಕ್ಷ ರೂ. ಗಳನ್ನು ಮಂಜೂರು ಮಾಡಿತ್ತು.

ಆದರೆ ಇದರ ಬಗ್ಗೆ ಗಮನ ಹರಿಸದ ಜಿಲ್ಲಾಡಳಿತ ಆ ಹಣವನ್ನು ಬರಪರಿಹಾರ ನಿಧಿಗಾಗಿ ಬಳಸಿಕೊಂಡಿದ್ದು. ಶ್ರೀಕಂಠಯ್ಯನವರ ಮನೆ ಕಸದ ತೊಟ್ಟಿಯಾಗಿ ನಾರುತ್ತಿದೆ.

ಅಂದಿನಿಂದ ಇಂದಿನವರೆಗೆ ಜಿಲ್ಲಾಡಳಿತವಾಗಲಿ, ಜನಪ್ರತಿನಿಧಿಗಳಾಗಲಿ ಈ ಬಗ್ಗೆ ಯೋಚಿಸದಿರುವುದು ದುರದೃಷ್ಟಕರ ಸಂಗತಿ. ಮನೆ ಕೆಡವಿದ ಸರ್ಕಾರ ಅತ್ತ ಮನೆಯೂ ಇಲ್ಲದಂತೆ ಮಾಡಿ ಇತ್ತ ಭವನವನ್ನೂ ನಿರ್ಮಿಸದೆ ಅಕ್ಕ ಪಕ್ಕದವರಿಗೆ ಕಸ ಹಾಕಲು ಅನುವು ಮಾಡಿಕೊಟ್ಟಿದೆ.

ಬಿ.ಎಂ.ಶ್ರೀ ಜನ್ಮ ದಿನಾಚರಣೆ ಕಾರ್ಯಕ್ರಮವನ್ನು ಅಲ್ಲಿ ಏರ್ಪಡಿಸಿ ಕನ್ನಡದ ಕಣ್ವರಿಗೆ ಗೌರವ ಅರ್ಪಿಸಬಹುದಾಗಿತ್ತು. ಆದರೆ ಸರ್ಕಾರ ಮತ್ತು ಜನತೆ ಅವರ ಕೊಡುಗೆಯನ್ನು

ಮರೆತು ಮನೆಯನ್ನು ಇಂತಹ ಅವಮಾನಕರ ದುಸ್ಥಿತಿಗೆ ತಂದಿದ್ದಾರೆ. ಸರ್ಕಾರ ಮತ್ತು ಜಿಲ್ಲಾಡಳಿತ ಇನ್ನಾದರೂ ಎಚ್ಚೆತ್ತು ಆ ಜಾಗದಲ್ಲಿ ಬಿ.ಎಂ.ಶ್ರೀ ಭವನ ನಿರ್ಮಿಸಿ ಕನ್ನಡದ ಕಣ್ವರನ್ನು ಗೌರವಿಸಲಿದೆಯೇ ? ಹಳೆ ಮನೆಯನ್ನು ಯಾವುದಾದರೂ ಸಂಘಸಂಸ್ಥೆಗೆ ನೀಡಿದ್ದರೆ ಬಿ.ಎಂ.ಶ್ರೀಯವರ ನೆನಪು ಉಳಿಸಿಕೊಳ್ಳಬಹುದಿತ್ತು. ಸರ್ಕಾರ ಯಾವ ಆಸಕ್ತಿಯನ್ನೂ ವಹಿಸದೆ, ಭವನ ನಿರ್ಮಿಸದೇ ಜಾಗವನ್ನು ಪಾಳು ಬಿಟ್ಟಿರುವುದು ಮಾತ್ರ ಶೋಚನೀಯ

(ಕೃಪೆ : ಉದಯವಾಣಿ 13-1-05)

ಈ ನಿಟ್ಟಿನಲ್ಲಿ ಬಿ.ಎಂ.ಶ್ರೀ ಪ್ರತಿಷ್ಠಾನ ಸಾಕಷ್ಟು ಪ್ರಯತ್ನ ಮಾಡಿದೆ. ಈ ಮನೆಯ ವಾರಸುದಾರರಾದ ಶ್ರೀ ಸೂರ್ಯನಾರಾಯಣ ಮತ್ತು ಸತ್ಯನಾರಾಯಣ ಸಹೋದರರೊಂದಿಗೆ ಚರ್ಚಿಸಿ ಸೂಕ್ತ ಸಲಹೆ-ಮಾರ್ಗದರ್ಶನವನ್ನು ನೀಡಲಾಗಿದೆ. ಆದರೇ ಅದು ಕಾರ್ಯರೂಪಕ್ಕೆ ಬಂದಿಲ್ಲ. ಸರ್ಕಾರಕ್ಕೆ ಜಾಗವನ್ನು ಕೊಡುವುದಕ್ಕೆ ಮೊದಲೇ ಒಂದು ಸಮಿತಿ ರಚಿಸಿ ಅದಕ್ಕೊಪ್ಪಿಸಿ, ಅಥವಾ ಪ್ರತಿಷ್ಠಾನಕ್ಕೆ ಕೊಡಿ ಅದರ ಮೂಲಕ ಸರ್ಕಾರದಿಂದ ಕಟ್ಟಡ ನಿರ್ಮಿಸಿ ಬೆಳ್ಳೂರಿನಲ್ಲಿರುವಂತೆ ನಿರಂತರ ಚಟುವಟಿಕೆಯಲ್ಲಿಡಬಹುದು ಎಂದು ಸಲಹೆ ಮಾಡಿದ್ದೆವು.

ಅದು ಕಾರ್ಯರೂಪಕ್ಕೆ ಬರದೆಹೋದಾಗ ಸರ್ಕಾರದ ಮಟ್ಟದಲ್ಲೇ, ಸರ್ಕಾರ ಪಡೆದ ಜಾಗದಲ್ಲಿ ಬಿ.ಎಂ.ಶ್ರೀ ಸ್ಮಾರಕ ಭವನ ನಿರ್ಮಿಸಲು ರಚಿಸಿದ್ದ ಸಮಿತಿಯಲ್ಲಿ ಬಿ.ಎಂ.ಶ್ರೀ ಪ್ರತಿಷ್ಠಾನವನ್ನು ಒಂದು ಸದಸ್ಯ ಸಂಸ್ಥೆಯನ್ನಾಗಿ ಸೇರಿಸಲು ಸಲಹೆ ಮಾಡಲಾಗಿತ್ತು. ಈ ಸಂಬಂಧ ಈ ಸಮಿತಿಯ ಅಧ್ಯಕ್ಷರಾಗಿರುವ ತುಮಕೂರಿನ ಜಿಲ್ಲಾಧಿಕಾರಿಗಳಿಗೂ ಪತ್ರ ಬರೆಯಲಾಗಿತ್ತು. ಇದೂ ಕಾರ್ಯಗತವಾಗಿಲ್ಲ.

ಈ ಬಗ್ಗೆ ಸರ್ಕಾರ ಸೂಕ್ತ ಕ್ರಮ ಕೈಗೊಂಡು ಮಂಜೂರಾಗದ್ದ ಅನುದಾನವನ್ನು ಭವನ ನಿರ್ಮಾಣಕ್ಕೆ ಹಿಂತಿರುಗಿಸಲು ಮತ್ತು ಶೀಘ್ರವಾಗಿ ನಿರ್ಮಿಸಲು ಕನ್ನಡಿಗರು ಒತ್ತಾಯಿಸಬೇಕಾಗಿದೆ. (ವ್ಯ.ಸಂ.)

## ೩. ಕನ್ನಡ ಸಂಸ್ಕೃತಿ ರಕ್ಷಣೆಗೆ ಸಂಪುಟ ದರ್ಜೆ ಇಲಾಖೆ ಅಗತ್ಯ

ಕನ್ನಡ ನಾಡು, ನುಡಿ, ನೆಲ, ಜಲದ ಅಭಿವೃದ್ಧಿಗೆ ಸಮರ್ಪಕವಾಗಿ ಕಾರ್ಯ ನಿರ್ವಹಿಸುವ ನಿಟ್ಟಿನಲ್ಲಿ ಕ್ಯಾಬಿನೆಟ್ ದರ್ಜೆಯ ಇಲಾಖೆ ಒಂದನ್ನು ರೂಪಿಸುವ ಅಗತ್ಯ ಇದೆ ಎಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ಪ್ರೊ. ನಾ. ಗೀತಾಚಾರ್ಯ ಅಭಿಪ್ರಾಯಪಟ್ಟರು.

ಕನ್ನಡ ಜನಶಕ್ತಿ ಸಂಘಟನೆಯು ಕನ್ನಡ ಸಾಹಿತ್ಯ ಪರಿಷತ್‌ನಲ್ಲಿ ಎಂದು **ಬಿ.ಎಂ.ಶ್ರೀಕಂಠಯ್ಯ ಅವರ 121ನೇ ಜನ್ಮದಿನೋತ್ಸವದ ಅಂಗವಾಗಿ ಏರ್ಪಡಿಸಲಾಗಿದ್ದ ಸಂಸ್ಮರಣೆ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.**

ಸರ್ಕಾರ ರೂಪಿಸಬೇಕಿರುವ ಆ ಇಲಾಖೆಯು ಹಣಕಾಸು ಇಲಾಖೆಯಷ್ಟೇ ಮಹತ್ವ ಹೊಂದಿರಬೇಕು. ಆ ಮಾದರಿಯ ಇಲಾಖೆ ರೂಪಿಸಲು ಸರ್ಕಾರದ ಮೇಲೆ ಒತ್ತಡ ತರುವ ಅಗತ್ಯವಿದೆ. ಹಾಗಾದಾಗ ಮಾತ್ರ ಕನ್ನಡದ ವಿರುದ್ಧ ನಡೆಯುವ ಸಂಚುಗಳನ್ನು ಪತ್ತೆ ಮಾಡಿ ಅಪಾಯವನ್ನು ತಪ್ಪಿಸಬಹುದು ಎಂದು ಅವರು ಮನವಿ ಮಾಡಿದರು.

ಭಾಷೆಯ ಅಭಿವೃದ್ಧಿಗಾಗಿ ಕೇಂದ್ರ ಸರ್ಕಾರ ನೀಡುತ್ತಿರುವ ಅಪಾರ ಪ್ರಮಾಣದ ಅನುದಾನ ಯಾರ ಗಮನಕ್ಕೂ ಬಾರದೆ ಬೇರೆ ಭಾಷೆಗಳ ಪಾಲಾಗುತ್ತಿವೆ. ಯಾವ ಯಾವ ಹಂತದಲ್ಲಿ ಕೇಂದ್ರ ಸರ್ಕಾರ ಹಣಕಾಸು ನೆರವು ನೀಡುತ್ತದೆ. ಎಂಬುದರ ಬಗ್ಗೆ ಗಮನ ಹರಿಸಲು ರಾಜ್ಯ ಸರ್ಕಾರವು ದೆಹಲಿ ಮಟ್ಟದಲ್ಲಿ ವಿಶೇಷ ಐಎಎಸ್ ಅಧಿಕಾರಿಯೊಬ್ಬರನ್ನು ನೇಮಿಸಬೇಕು. ಅವರಿಗೆ ಕನ್ನಡದ ಗಂಧಗಾಳಿಯ ಪರಿಚಯ ವಿರಬೇಕು ಎಂದು ಅವರು ಹೇಳಿದರು.

**ಶಾಸ್ತ್ರೀಯ ಭಾಷೆ** : ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನಮಾನ ದೊರಕಿಸಿಕೊಳ್ಳುವ ಅಗತ್ಯ ಇದೆ ಎಂದ ಅವರು. ಪ್ರಾಚೀನ ಭಾಷೆಯಾದ ಕನ್ನಡಕ್ಕೂ ಆ ಸ್ಥಾನ ದೊರೆತಲ್ಲಿ ಸಾಕಷ್ಟು ಅಭಿವೃದ್ಧಿ ಸಾಧ್ಯ ಎಂದ ಗೀತಾಚಾರ್ಯ, ಸಂಸದರು, ಶಾಸಕರು ಶಾಸ್ತ್ರೀಯ ಭಾಷೆಯ ಸ್ಥಾನಮಾನವೆಂದರೇನು ಎಂಬುದನ್ನು ಅರಿತುಕೊಂಡು ಆ ಬಗ್ಗೆ ಒತ್ತಡ ಹೇರುವ ಅಗತ್ಯ ಇದೆ ಎಂದು ನುಡಿದರು.

ರಾಜಕೀಯ ಒತ್ತಡದಿಂದ ತಮಿಳು ಭಾಷೆಗೆ ಆ ಸ್ಥಾನಮಾನ ದೊರೆತಿದೆ. ಕೇಂದ್ರದ ನೆರವು ಪಡೆಯುವಲ್ಲಿ ತಮಿಳುನಾಡು ಮಾದರಿಯ ಬೇಡಿಕೆ ಸಲ್ಲಿಸುವ ಅಗತ್ಯ ಇದೆ ಎಂದು ಹೇಳಿದರು.

ಕನ್ನಡದ ಸಮಗ್ರ ಬೆಳವಣಿಗೆಗೆ ಸಂಬಂಧಿಸಿದಂತೆ ಕನ್ನಡ ಅಭಿವೃದ್ಧಿ ಪ್ರಾಧಿಕಾರವೂ ಕಳಕಳಿ ವ್ಯಕ್ತಪಡಿಸುತ್ತಿಲ್ಲ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇದ್ದರೂ ಅದಕ್ಕೆ ಪೂರ್ಣ ಪ್ರಮಾಣದ ಅಧಿಕಾರಗಳಿಲ್ಲ ಎಂದು ಅವರು ವಿಷಾದಿಸಿದರು.

ಬಿ.ಎಂ.ಶ್ರೀ ಅವರಂತಹ ಮಹಾನ್ ಚೇತನವನ್ನು ಸ್ಮರಿಸುತ್ತಿರುವುದು ಅಭಿನಂದನಾರ್ಹ. ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದೂ ಕನ್ನಡದ ಏಳ್ಗೆಗೆ ಅವರು ಮಹಾನ್ ಸೇವೆ ಸಲ್ಲಿಸಿದರು ಎಂದು ಕಾರ್ಯಕ್ರಮ ಉದ್ಘಾಟಿಸಿದ ವಿಧಾನ ಪರಿಷತ್ ಸಭಾಪತಿ ವಿ. ಆರ್. ಸುದರ್ಶನ್ ಅಭಿಪ್ರಾಯಪಟ್ಟರು.

ರಾಜ್ಯದ ಸಮಗ್ರ ಅಭಿವೃದ್ಧಿಯ ಹಿನ್ನೆಲೆಯಲ್ಲಿ ಸರ್ಕಾರ ಡಾ॥ ನಂಜುಂಡಪ್ಪ ಅವರ ವರದಿ ಅನುಷ್ಠಾನಗೊಳಿಸಲಿದೆ ಎಂದು ಅವರು ಘೋಷಿಸಿದರು. ಅಧ್ಯಕ್ಷತೆ ವಹಿಸಿದ್ದ ಲೇಖಕ ಪ್ರೊ॥ ಎಲ್. ಎಸ್. ಶೇಷಗಿರಿರಾವ್ ಕನ್ನಡ ಸಾಹಿತ್ಯ ಪರಿಷತ್ ಪ್ರಕಟಿತ ಪುಸ್ತಕವೊಂದನ್ನು ಬಿಡುಗಡೆ ಮಾಡಿದರು. ಜಾನಪದ ವಿದ್ವಾಂಸ ಡಾ॥ ಚಿಕ್ಕೆರೆ ಶಿವಶಂಕರ್, ಕನ್ನಡ ಜನಶಕ್ತಿ ಸಂಘಟನೆಯ ಅಧ್ಯಕ್ಷ ಸಿ. ಕೆ. ರಾಮೇಗೌಡ ಉಪಸ್ಥಿತರಿದ್ದರು.

(ಕೃಪೆ : ಪ್ರಜಾವಾಣಿ, 4-1-2005)

### ೪) ಸಮಾನ ಶಿಕ್ಷಣ ನೀತಿಗಾಗಿ ಆಗ್ರಹಿಸಿ ಮಾತೃಭಾಷಾ ಮಾಧ್ಯಮ ಚಳುವಳಿ

ಕರ್ನಾಟಕ ಏಕೀಕರಣವಾಗಿ ಅರ್ಧ ಶತಮಾನವೇ ಕಳೆಯುತ್ತ ಬಂದಿದ್ದರೂ ನಮ್ಮ ನಾಡು-ನುಡಿ-ಸಂಸ್ಕೃತಿಗಳ ರಕ್ಷಣೆಗಾಗಿ ನಾವೆಲ್ಲ ಆಗಿಂದಾಗ್ಯೆ ಚಳುವಳಿಯ ಮಾರ್ಗ ಹಿಡಿಯುವುದು ಅನಿವಾರ್ಯವಾಗಿದೆ. ನಿರಂತರ ಜಾಗೃತಿಯೇ ಪ್ರಜಾಸತ್ತೆಯ ಉಳಿವಿಗಾಗಿ ನಾವು ತೆರಬೇಕಾದ ಬೆಲೆ-ಎಂಬುದು ಕನ್ನಡ ನಾಡಿಗಂತೂ ಸದಾಕಾಲ ಅನ್ವಯವಾಗುವ ಮಾತಾಗಿದೆ.

ಈಗ ನಮಗೆದುರಾಗಿರುವ ಸಮಸ್ಯೆ ಶಿಕ್ಷಣ ರಂಗಕ್ಕೆ ಸಂಬಂಧಿಸಿದ್ದು. ನಾಡಿನ ಸಾರ್ವಭೌಮ ಸ್ಥಾನದಲ್ಲಿರಬೇಕಾಗಿದ್ದ ಕನ್ನಡ ಭಾಷೆಗೆ ಈಗ ಮತ್ತೆ ಕುತ್ತು ಒದಗಿಬಂದಿದೆ. ಪ್ರಾಥಮಿಕ ಶಿಕ್ಷಣದಲ್ಲಿ ಕನ್ನಡವೇ ಬೋಧನಾ ಮಾಧ್ಯಮವಾಗಿರಬೇಕಾದುದು ನ್ಯಾಯಬದ್ಧ. ಈ ಕುರಿತು ಸುಪ್ರೀಂ ಕೋರ್ಟಿನ ಆದೇಶವಿದ್ದರೂ ನಮ್ಮ ಸರಕಾರಗಳ ಇಚ್ಛಾಶಕ್ತಿಯ ಕೊರತೆಯಿಂದಾಗಿಮಾತೃಭಾಷಾ ಮಾಧ್ಯಮದ ಅನುಷ್ಠಾನ ದುಸ್ತರವಾಗುತ್ತಿದೆ.

ಜಾಗತೀಕರಣದ ಆಕ್ರಮಣದ ಅಸ್ತ್ರವಾಗಿರುವ ಇಂಗ್ಲಿಷ್ ಭಾಷೆಯಿಂದ ಕನ್ನಡದ ಹಿತಾಶಕ್ತಿಗಳಿಗೆ ಧಕ್ಕೆ ಉಂಟಾಗತೊಡಗಿದೆ. ಈ ಹಿನ್ನೆಲೆಯಲ್ಲಿ ನಾಡಿನ ಪ್ರತಿಷ್ಠಿತ ಮತ್ತು ಪ್ರಾತಿನಿಧಿಕ ಸಂಸ್ಥೆಯಾಗಿರುವ ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಜೂನ್ 14 ರಂದು, ಮಂಗಳವಾರ ಮುಂಜಾನೆ 10-30ಕ್ಕೆ ಜನಪರ ಚಳುವಳಿಯೊಂದು ಆರಂಭವಾಗಿದೆ. ಅದೇ : ಸಮಾನ ಶಿಕ್ಷಣ ನೀತಿಗಾಗಿ ಆಗ್ರಹಿಸಿ ಮಾತೃಭಾಷಾ ಮಾಧ್ಯಮ ಚಳುವಳಿ.

### ಈ ಜನಾಂದೋಲನದ ಮುಖ್ಯ ಹಕ್ಕೊತ್ತಾಯಗಳು :

1) ಸುಪ್ರೀಂ ಕೋರ್ಟಿನ ಆದೇಶಕ್ಕೆ ಅನುಗುಣವಾಗಿ ಪೂರ್ವ ಪ್ರಾಥಮಿಕ ಹಂತವನ್ನು ಒಳಗೊಂಡ ಹಾಗೆ 1 ರಿಂದ 7ನೇ ತರಗತಿಯವರೆಗೆ ಮಾತೃಭಾಷೆ ಅಥವ ಪ್ರಾದೇಶಿಕ ಭಾಷೆಯನ್ನು ಕಡ್ಡಾಯ ಬೋಧನಾ ಮಾಧ್ಯಮವನ್ನಾಗಿ ಇದೇ ಶೈಕ್ಷಣಿಕ ವರ್ಷದಿಂದ ರಾಜ್ಯ ಸರ್ಕಾರವು ಜಾರಿಗೆ ತರುವುದಾಗಿ ಘೋಷಿಸಬೇಕು.

2) ಸುಪ್ರೀಂ ಕೋರ್ಟಿನ ಆದೇಶಕ್ಕೆ ರಾಜ್ಯ ಹೈಕೋರ್ಟಿನಲ್ಲಿ ಇರುವ ತಡೆಯಾಜ್ಞೆಯನ್ನು ಸರ್ಕಾರವು ಕೊಡಲೇ ತೆರವುಗೊಳಿಸಲು ಮುಂದಾಗಬೇಕು.

3) ಒಂದನೇ ತರಗತಿಯಿಂದ ಇಂಗ್ಲಿಷ್ ಭಾಷೆಯ ಕಲಿಕೆಯನ್ನು ಪ್ರಾರಂಭಿಸಬೇಕೆಂಬ ಪ್ರಸ್ತಾವನೆಗೆ ನಮ್ಮ ತೀವ್ರ ವಿರೋಧವಿದೆ. ಬೇಕಿದ್ದರೆ ಇಂಗ್ಲಿಷನ್ನು ಒಂದು ಭಾಷೆಯನ್ನಾಗಿ 3ನೇ ತರಗತಿಯಿಂದ ಐಚ್ಛಿಕವಾಗಿ ಮತ್ತು 5ನೇ ತರಗತಿಯಿಂದ ವ್ಯವಸ್ಥಿತವಾಗಿ ಕಲಿಸಬಹುದು.

4) ಸದ್ಯದ ಶಿಕ್ಷಣ ನೀತಿಯನ್ನು ಉಲ್ಲಂಘಿಸಿ ಕನ್ನಡದ ಬದಲಾಗಿ ಇಂಗ್ಲಿಷ್ ಮೂಲಕ ಎಲ್ಲ ವಿಷಯಗಳನ್ನು ಬೋಧಿಸುತ್ತಿರುವ ಕನ್ನಡ ದ್ರೋಹಿ ಶಾಲೆಗಳನ್ನು ಪತ್ತೆ ಮಾಡಿ ಅವುಗಳ ಮಾನ್ಯತೆ ರದ್ದು ಮಾಡಬೇಕು. ಈ ಕುತಂತ್ರದಲ್ಲಿ ಶಾಮೀಲಾಗಿರುವ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳಬೇಕು.

5) ಕೇಂದ್ರ ಪಠ್ಯಕ್ರಮದ ಶಾಲೆಗಳಲ್ಲಿ ನಿಯಮಾನುಸಾರ ಅಂತರರಾಜ್ಯ ವರ್ಗಾವಣೆಯ ಸಾಧ್ಯತೆಯುಳ್ಳ ಪೋಷಕರ ಮಕ್ಕಳಿಗೆ ಮಾತ್ರ ಅವಕಾಶವಿರಬೇಕು. ಅಲ್ಲಿಯ ವಿದ್ಯಾರ್ಥಿಗಳಿಗೆ ರಾಜ್ಯಭಾಷೆಯಾದ ಕನ್ನಡವನ್ನು ಕಲಿಸುವ ವ್ಯವಸ್ಥೆ ಮಾಡಲು ರಾಜ್ಯ ಸರ್ಕಾರವು ಕೇಂದ್ರ ಸರ್ಕಾರವನ್ನು ಆಗ್ರಹಿಸಬೇಕು.

ಈ ಜನಾಂದೋಲನದಲ್ಲಿ ನಮ್ಮ ಸಾಂಸ್ಕೃತಿಕ, ಸಾಹಿತ್ಯಿಕ ಲೋಕದ ಗಣ್ಯರು, ಶಿಕ್ಷಣ ತಜ್ಞರು, ಮನೋವಿಜ್ಞಾನಿಗಳು ಮತ್ತು ಮುಖ್ಯವಾಗಿ ನಮ್ಮ ಎಲ್ಲ ಕನ್ನಡವರ ಸಂಘಟನೆಗಳ ಪ್ರಮುಖರು ಮತ್ತು ಕಾರ್ಯಕರ್ತರು ಪಾಲ್ಗೊಂಡಿದ್ದರು.

ಆದರೆ ಈ ಚಳುವಳಿ ಚರ್ಚೆಗೆ ಒಳಗಾಗಿದ್ದು ಅನಗತ್ಯವಾಗಿ ಈ ಮಾಧ್ಯಮದಲ್ಲಿ

ಕನ್ನಡ ಭಾಷಾ ಕಲಿಕೆಯ ಪ್ರಶ್ನೆ ಮುಂದೆಬಂದಿದೆ. ಕನ್ನಡ ಮಾಧ್ಯಮವನ್ನು ಪ್ರಾಥಮಿಕ ಮತ್ತು ಮಾಧ್ಯಮಿಕ ಹಂತದಲ್ಲಿ ಜಾರಿಗೊಳಿಸುವ ಪ್ರಸ್ತಾಪ ಕನ್ನಡ ಸಾಹಿತಿಗಳಿಂದ ಬಂದಾಗ ಸರ್ಕಾರದ ಮೇಲೆ ಬೀಳಬಹುದಾದ ಒತ್ತಡವನ್ನು ಕಡಿಮೆ ಮಾಡಲು ಮತ್ತು ಸಾರ್ವಜನಿಕರ ಗಮನವನ್ನು ಬೇರೆಡೆ ಸೆಳೆಯಲು ಕನ್ನಡ ಭಾಷೆಯನ್ನು 1ನೇ ತರಗತಿಯಿಂದ ಕಲಿಸುವ ವಿಚಾರವನ್ನು ಮುಂದಿಟ್ಟು ಉದ್ದೇಶಪೂರ್ವಕವಾಗಿ ಸರ್ಕಾರ ಕನ್ನಡಿಗರನ್ನು ದಾರಿತಪ್ಪಿಸಿದೆ. ಸುಪ್ರೀಂ ಕೋರ್ಟ್‌ನಲ್ಲಿರುವ ತಡೆಯಾಜ್ಞೆಯನ್ನು ತೆರವುಗೊಳಿಸಲು ಸರ್ಕಾರಕ್ಕೆ ಇಚ್ಛೆಯಿಲ್ಲ ಮತ್ತು ಕನ್ನಡದ ಬಗೆಗೆ ಕಾಳಜಿಯಿಲ್ಲ ಎಂಬುದನ್ನು ಈ ಸರ್ಕಾರ ಮತ್ತೊಮ್ಮೆ ಸಾಬೀತುಪಡಿಸಿದೆ.

ಸರ್ಕಾರ ರಚನೆಯಾಗಿ ವರ್ಷವಾದರೂ ಕನ್ನಡ ಸಂಸ್ಕೃತಿ ಇಲಾಖೆಗೆ ಸಚಿವರನ್ನು ನೇಮಿಸದೆ ಇರುವ ಮೂಲಕ ಈಗಾಗಲೆ ಅದನ್ನು ಜಾಹೀರುಗೊಳಿಸಿದೆ. ಸುವರ್ಣ ಕರ್ನಾಟಕದ ಆಚರಣೆಯ ಯೋಜನೆಗಳ ಅನುಷ್ಠಾನದ ಈ ಸಂದರ್ಭದಲ್ಲಿ ಸಚಿವರ ನೇಮಕ ಬಹಳ ಮುಖ್ಯವಾಗಿದೆ ಮತ್ತು ಈ ಸಚಿವರ ಸ್ಥಾನವನ್ನು ಕ್ಯಾಬಿನೆಟ್ ದರ್ಜೆಯ ಸ್ಥಾನಕ್ಕೇರಿಸಬೇಕಾಗಿದೆ. ಕರ್ನಾಟಕಕ್ಕೆ ಸಂಬಂಧಿಸಿದಂತೆ ಯಾವುದೇ ಮುಖ್ಯ ತೀರ್ಮಾನವನ್ನು ಕೈಗೊಳ್ಳುವ ಸಂಪುಟ ಸಭೆಯನ್ನು ಕನ್ನಡಕ್ಕೆ ಸ್ಥಾನವಿಲ್ಲದಿರುವುದು ಈ ಐವತ್ತು ವರ್ಷಗಳ ವ್ಯಂಗ್ಯವಾಗಿದೆ. ಸುವರ್ಣ ಕರ್ನಾಟಕದ ಸಂದರ್ಭದಲ್ಲಾದರೂ ಕನ್ನಡ ಸಚಿವ ಸ್ಥಾನವನ್ನು ಸಂಪುಟ ದರ್ಜೆ ಸ್ಥಾನವಾಗಿಸುವುದು ಕನ್ನಡಿಗರ ಪ್ರಧಾನ ಹಕ್ಕೊತ್ತಾಯವಾಗಬೇಕು.

ಸಚಿವ ಸಂಪುಟದಲ್ಲೇ ಕನ್ನಡ ಸಚಿವರೊಬ್ಬರಿದ್ದಿದ್ದರೆ ಈ ಮಾಧ್ಯಮದ ವಿವಾದವನ್ನು ಹನ್ನೊಂದು ವರ್ಷಗಳವರೆಗೆ ನಿರ್ಲಕ್ಷಿಸಬೇಕಾಗಿರಲಿಲ್ಲ. ಸರ್ಕಾರ ತನಗಿರುವ ಕನ್ನಡ ಕಾಳಜಿಯನ್ನು ಆದಷ್ಟು ಶೀಘ್ರ ತಡೆಯಾಜ್ಞೆ ತೆರವುಗೊಳಿಸುವ ಮೂಲಕ ಮತ್ತು ಕನ್ನಡ ಸಂಸ್ಕೃತಿ ಸಚಿವರನ್ನು ನೇಮಿಸಿ ಅದಕ್ಕೆ ಸಂಪುಟ ದರ್ಜೆಗೇರಿಸುವ ಮೂಲಕ ತೋರಿಸಬೇಕು.

ಕನ್ನಡ ಸಾಹಿತ್ಯ ಪರಿಷತ್ತು ಹಮ್ಮಿಕೊಂಡಿರುವ "ಮಾತೃಭಾಷಾ ಮಾಧ್ಯಮ ಚಳವಳಿ" ಸಕಾಲಿಕವಾಗಿದ್ದು ಆಜ್ಞೆ ಜಾರಿಗೆ ಬರುವವರೆಗೆ ಕನ್ನಡಿಗರು ಒಕ್ಕೂರಲಿನಿಂದ ತಮ್ಮ ಹಕ್ಕೊತ್ತಾಯವನ್ನು ಮಂಡಿಸಬೇಕು ಮತ್ತು ಈ ಹಕ್ಕೊತ್ತಾಯದಲ್ಲಿ ಸಂಪುಟದರ್ಜೆ ಕನ್ನಡ ಸಚಿವರ ನೇಮಕವನ್ನು ಸೇರಿಸಿಕೊಳ್ಳಬೇಕು.

(ವ್ಯ. ಸಂ.)

## ಋ) ಗ್ರಂಥಾಲಯ ಸಗಟು ಖರೀದಿ : ಅವ್ಯವಹಾರಕ್ಕೆ ಮಣೆ

ಗ್ರಂಥಾಲಯ ಇಲಾಖೆ ಹೊರಡಿಸಿರುವ ಪರಿಷ್ಕೃತ ಆದೇಶವನ್ನು ಈಚೆಗೆ ಪ್ರಜಾವಾಣಿ (12-5-05)ರ ಸಂಚಿಕೆಯಲ್ಲಿ "ಗ್ರಂಥಾಲಯ : ಅವ್ಯವಹಾರ ತಡೆಗೆ ಕ್ರಮ" ಎಂಬ ವಿವರವಾದ ಸುದ್ದಿ ಪ್ರಕಟಿಸಿದೆ. ಅಧಿಕಾರಿಗಳು ಮಾಡುವ ಇಂತಹ ಸಂಚಿನ ಆದೇಶಗಳ ನೆರಳಿನಲ್ಲಿ 'ಅವ್ಯವಹಾರ' ತಡೆರಹಿತವಾಗಿ ನಡೆಯುತ್ತದೆ. ಇದು ವಾಸ್ತವದಲ್ಲಿ ತಡೆಗೆ ಕ್ರಮವಲ್ಲ ಅವ್ಯವಹಾರಕ್ಕೆ ಮಣೆಹಾಕುವ ಕ್ರಮ !

(1) ಆಯ್ಕೆ ಸಮಿತಿ ಮತ್ತು ಆಯ್ಕೆ ಪಟ್ಟಿ : ದಂದೆಗೆ ದಾರಿ ಇದರಿಂದ

ಆಯ್ಕೆಪಟ್ಟಿಯಲ್ಲಿರುವ ಪುಸ್ತಕಗಳನ್ನೆಲ್ಲ ಗ್ರಂಥಾಲಯಗಳು ಕೊಳ್ಳುವುದಿಲ್ಲ. ಜಿಲ್ಲಾ ಗ್ರಂಥಾಲಯಗಳೇ ಕೊಳ್ಳುವ ಸ್ವಾತಂತ್ರ್ಯ ಇರುವುದರಿಂದ ಅವರು ಚೆನ್ನಾಗಿಯೇ ವ್ಯಾಪಾರ ಮಾಡುತ್ತಾರೆ. ಅವರೊಂದಿಗೆ ವ್ಯಾಪಾರ ಕುದುರಿಸಲು ಅನೇಕ ಪುಸ್ತಕ ಸಂಸ್ಥೆಗಳು ಸಜ್ಜಾಗಿರುತ್ತವೆ. ಈ ವ್ಯಾಪಾರ ಎಷ್ಟು ಲಾಭದಾಯಕವಾಗಿರುತ್ತದೆ. ಎಂದರೆ ಗ್ರಂಥಾಲಯ ಇಲಾಖೆಯ ಅಧಿಕಾರಿಗಳು ಕೆಲಸ ಬಿಟ್ಟು 'ಸಂಸ್ಥೆ' ನಡೆಸುತ್ತಾರೆ! ಹೀಗಿರುವಾಗ ಲೇಖಕ-ಪ್ರಕಾಶಕರ ಪುಸ್ತಕಕ್ಕೆ ಕವಡೆ ಕಾಸಿನ ಕಿಮ್ಮತ್ತೂ ಇರುವುದಿಲ್ಲ. ಪಟ್ಟಿ ನೆಪಮಾತ್ರ ಅಷ್ಟೆ. ಪಟ್ಟಿಯಲ್ಲಿ ಹೆಸರಿದ್ದಾಕ್ಷಣ ಪುಸ್ತಕ ಆಯ್ಕೆಯಾಯಿತೆಂದು ಸಂಭ್ರಮಿಸಿ ಗ್ರಂಥಾಲಯಗಳಿಗೆ ಪತ್ರ ಬರೆದರೆ ಅಂಚೆವೆಚ್ಚವೂ ಲುಕ್ಸಾನು. ಸಮಿತಿಯ ಸದಸ್ಯರನ್ನು ಹಿಡಿದು ಪಟ್ಟಿಗೆ ಪುಸ್ತಕ ಸೇರಿಸುವುದರಿಂದ.ಈ ದಂದೆ ಆರಂಭವಾಗುತ್ತದೆ.

2) ಪುಸ್ತಕಗಳ ವರ್ಗೀಕರಣ : ಸಾಹಿತ್ಯ ಶೇ. 40/ ಮಕ್ಕಳ ಸಾಹಿತ್ಯ ಶೇ. 10/- ಕಲೆ ಶೇ. 10/ ಇತ್ಯಾದಿ ವರ್ಗೀಕರಣ. ಯಾರಿಗೆ ಬೇಕು ಏಕೆಬೇಕು. ಇದರ ಉದ್ದೇಶವೇನು ? ದಂದೆಕೋರರ ಪುಸ್ತಕಗಳನ್ನು ಪಟ್ಟಿಯಲ್ಲಿ ಸೇರಿಸುವುದಕ್ಕೆ ಅನುಕೂಲವಾಗುವಂತೆ ದಂದೆ ನಡೆಸದ-ಗೊತ್ತಿಲ್ಲದ-ಬಡಪಾಯಿ ಲೇಖಕರ ಪುಸ್ತಕಗಳನ್ನು ಕೈಬಿಡುವುದಕ್ಕೆ ಈ ವರ್ಗೀಕರಣ ಸಹಾಯಕವಾಗುತ್ತದೆ. ಪುಸ್ತಕಗಳನ್ನು ಆಯ್ಕೆಯ ಸಮಯದಲ್ಲೇ ಹೀಗೆ ವರ್ಗೀಕರಿಸುವುದಕ್ಕೆ ಇಲಾಖೆಯಲ್ಲಿ ಯಾವ ಸಿದ್ಧತೆಯಿರುತ್ತದೆ ? ಈ ಕಣ್ಣೊರೆಸುವ ನಾಟಕವೇಕೆ ?

3) ಈಗಿನ ಈ ಪರಿಷ್ಕೃತ ಆದೇಶ ಮೊದಲಿದ್ದ ಆದೇಶಕ್ಕಿಂತ ಯಾವಂಶದಲ್ಲೂ ಸುಧಾರಣೆಯಾಗಿಲ್ಲ. ಸಾಹಿತಿಗಳು -ಪ್ರಕಾಶಕರು ನಡೆಸಿದ ಪ್ರತಿಭಟನೆ ನೀಡಿದ್ದ ಸಲಹೆಗಳೆಲ್ಲ ಮಣ್ಣುಪಾಲಾಗಿ ಅಧಿಕಾರಿಗಳ ಹಣಗಳಿಸುವ ತಂತ್ರವೇ ತಲೆಎತ್ತಿನಿಂತಿದೆ. ಮುಖ್ಯಮಂತ್ರಿಗಳು ಈ ಬಗ್ಗೆ ಗಮನಹರಿಸಿ ಈ ಆದೇಶವನ್ನು ಹಿಂಪಡೆದು ಏಕಗನಾಕ್ಷಿ ಖರೀದಿ ಪದ್ಧತಿಯನ್ನು ಜಾರಿಗೆ ತಂದು ಈಗ ನಡೆಯುತ್ತಿರುವ ಪುಸ್ತಕ ದಂದೆಯನ್ನು ತಪ್ಪಿಸುವಲ್ಲಿ ಮುಂದಾಗಬೇಕು. ಏಕಗವಾಕ್ಷ ಪದ್ಧತಿ ಜಾರಿಗೆ ಬರಲಿ.

ಜಿಲ್ಲಾ ಗ್ರಂಥಾಲಯಗಳಿಗೆ ಕೊಟ್ಟಿರುವ ಶೇ. 10 ಪ್ರಮಾಣದ ಸ್ವಂತ ವಿವೇಚನೆಯ ಕೊಳ್ಳುವ ಅವಕಾಶವನ್ನು ಮಾತ್ರ ಅವರಿಗೆ ಕೊಟ್ಟು ಉಳಿದ ಶೇ. 90 ರ ಪ್ರಮಾಣದ ಮೊತ್ತಕ್ಕೆ ಆಯ್ಕ ಸಮಿತಿಯೇ ಪುಸ್ತಕದ ಬೆಲೆಗೆ ಅನುಗುಣವಾಗಿ ಇಂತಿಷ್ಟು ಪುಸ್ತಕಗಳೆಂದು ನಿಗದಿಮಾಡಬೇಕು. ಆಯ್ಕೆಯಾದ ಪುಸ್ತಕಗಳ ಲೇಖಕರಿಗೆ ಇಲಾಖೆಯೇ ಆದೇಶ ಪ್ರತಿಕಳಿಸಿ ಒಂದೇ ಕಡೆ ಅಥವಾ ಆಯಾ ಜಿಲ್ಲಾ ಗ್ರಂಥಾಲಯಗಳಿಗೇ ಇಂತಿಷ್ಟು ಪ್ರತಿಗಳನ್ನು ಸರಬರಾಜು ಮಾಡಿಸಿ, ಒಂದೇ ಮೊತ್ತದಲ್ಲಿ ಗ್ರಂಥಾಲಯ ಇಲಾಖೆಯೇ ಲೇಖಕರಿಗೆ ಚೆಕ್ ಪಾವತಿಮಾಡುವ ಏಕಗವಾಕ್ಷಿ ಪದ್ಧತಿಯನ್ನು ಜಾರಿಗೆ ತರಬೇಕು. ಹೀಗಾದಾಗ ಮಾತ್ರ ಉತ್ತಮ ಪುಸ್ತಕಗಳು ಗ್ರಂಥಾಲಯಕ್ಕೆ ಸೇರುತ್ತವೆ. ಎಲ್ಲ ಲೇಖಕರಿಗೂ ಸಹಾಯವಾಗುತ್ತದೆ. ಪುಸ್ತಕ ಸಂಸ್ಕೃತಿ ಸಂಪನ್ನವಾಗುತ್ತದೆ.

ಪುಸ್ತಕ ಪ್ರಾಧಿಕಾರದ ಮೂಲಕ ನಡೆಯಲಿ : ಗ್ರಂಥಾಲಯ ಇಲಾಖೆಗೆ ಇದು ಕಷ್ಟವಾದರೆ ಆ ಹಣವನ್ನೆಲ್ಲ ಪುಸ್ತಕ ಪ್ರಾಧಿಕಾರಕ್ಕೆ ವರ್ಗಾಯಿಸಿ ಪ್ರಾಧಿಕಾರದಿಂದ ಈ ಕಾರ್ಯಮಾಡಿಸಬಹುದು. ಪ್ರಾಧಿಕಾರವೂ ಪುಸ್ತಕ ಖರೀದಿಗಾಗಿ ಇರುವ ಹಣವನ್ನೆಲ್ಲ ಬೇರೆ

ಬೇರೆ ಯೋಜನೆಗಳಿಗೆ ವಿನಿಯೋಗಿಸಿ 'ಭಿಕ್ಷೆ' ನೀಡುವಂತೆ ಕಲಾ ಪುಸ್ತಕಕ್ಕೆ 2 ಸಾವಿರವೋ, 3 ಸಾವಿರವೋ ನಿಗದಿ ಮಾಡುವ ಕಷ್ಟ ತಪ್ಪಿ ಸರಾಗವಾಗಿ ಪುಸ್ತಕ ಕೊಳ್ಳಲು ಸಹಾಯವಾಗುತ್ತದೆ.

ಸಾರ್ವಜನಿಕ ಶಿಕ್ಷಣ ಇಲಾಖೆ, ಗ್ರಂಥಾಲಯ ಇಲಾಖೆ, ಪುಸ್ತಕ ಪ್ರಾಧಿಕಾರ, ನವಸಾಕ್ಷರ ಯೋಜನೆ ಇತ್ಯಾದಿ ಹಲವು ಇಲಾಖೆಗಳು ಪ್ರತ್ಯೇಕವಾಗಿ ಪುಸ್ತಕ ಕೊಳ್ಳುವ 'ವ್ಯವಹಾರ' ನಡೆಸುವ ಬದಲು ಪುಸ್ತಕ ಸಂಸ್ಕೃತಿಗಾಗಿಯೇ ಇರುವ ಪುಸ್ತಕ ಪ್ರಾಧಿಕಾರದಿಂದಲೇ ಒಂದೇ ಕಡೆ 'ಪುಸ್ತಕ ಖರೀದಿ' ಸಾಧ್ಯವಾದರೆ ಪ್ರಕಟವಾಗುವ ಎಲ್ಲ ಪುಸ್ತಕಗಳ ತಲಾ 1000 ಪ್ರತಿಗಳನ್ನು ನಿರಾತಂಕವಾಗಿ ಕೊಳ್ಳಬಹುದು. ಸರ್ಕಾರ ಗಮನ ಹರಿಸಲಿ.

## ೬) ತುಳು, ಕೊಡವ, ಕೊಂಕಣಿ, ಉರ್ದು ಅಕಾಡೆಮಿಗಳ ಕರ್ತವ್ಯ :

ಭಾಷಾ ಅಲ್ಪ ಸಂಖ್ಯಾತರಿಗೆ ಭಾರತದ ಯೂವ ರಾಜ್ಯದಲ್ಲೂ ಇಲ್ಲದ ಸವಲತ್ತು ಕರ್ನಾಟಕದಲ್ಲಿ ಮಾತ್ರ ಇದೆ. ಇವುಗಳನ್ನು ಬಳಸಿಕೊಂಡು ಅನೇಕ ಸೌಲಭ್ಯಗಳನ್ನು ಇವರು ತಮ್ಮದಾಗಿಸಿಕೊಳ್ಳುತ್ತಿದ್ದಾರೆ. ಇದು ಯಾವ ಸ್ವರೂಪಕ್ಕೆ ಬಂದುಮುಟ್ಟಿದೆಯೆಂದರೆ ಒಂಟೆಯ ಕಥೆಯಂತಾಗಿದೆ. ಸೌಲಭ್ಯ ನೀಡುತ್ತಿರುವವರನ್ನೇ ಹೊರದಬ್ಬಿ ತನ್ನ ಅಸ್ತಿತ್ವವನ್ನು ಸ್ಥಾಪಿಸುವ ಆಕ್ರಮಣಕಾರಿ ಧೋರಣೆಗೆ ಬಂದು ನಿಂತಿದೆ. ಶಿಕ್ಷಣ ಸಂಸ್ಥೆಗಳು ಸರ್ಕಾರದ ನಿಯಮಗಳಿಗೆ ಬದ್ಧರಾಗದೆ ತಮ್ಮದೇ ಆದ ಪ್ರತ್ಯೇಕ ನಿಯಮಗಳನ್ನು ರೂಪಿಸಿಕೊಳ್ಳುವುದು, ಕನ್ನಡ-ಕನ್ನಡಿಗ-ಕರ್ನಾಟಕದ ಹಿತಕ್ಕೆ ವಿರುದ್ಧವಾದ ಚಟುವಟಿಕೆಗಳಲ್ಲಿ ತೊಡಗುವುದು, ಕನ್ನಡದ ಮುಖ್ಯ ವಾಹಿನಿಯಲ್ಲಿ ಬರದೆ ಪ್ರತ್ಯೇಕವಾಗಿ ಗುರುತಿಸಿಕೊಳ್ಳುವುದು ಇತ್ಯಾದಿ ಅಪಾಯಕಾರಿ ಧೋರಣೆಗಳನ್ನು ಅನುಸರಿಸುತ್ತಿರುವುದು ಇತ್ತೀಚಿನ ದಿನಗಳಲ್ಲಿ ಅಧಿಕವಾಗುತ್ತಿದೆ.

ಆಂಗ್ಲ ಮಾಧ್ಯಮ ಶಾಲೆಗಳು ಕನ್ನಡ ಮಾಧ್ಯಮವನ್ನು ಕೋರ್ಟಿನಲ್ಲಿ ಪ್ರಶ್ನಿಸಿರುವುದು, ಕೊಂಕಣಿ ಅಕಾಡೆಮಿ, ಕೊಂಕಣಿ ಭಾಷೆಗಳನ್ನು ಪಠ್ಯಗಳಲ್ಲಿ ಕನ್ನಡ ಲಿಪಿಯ ಬಳಕೆಗೆ ವಿರೋಧ ವ್ಯಕ್ತಪಡಿಸುವುದು. ಉರ್ದು ಅಕಾಡೆಮಿ ಆಹ್ವಾನ ಪತ್ರ- ಪ್ರಕಟನೆಗಳನ್ನು ಉರ್ದು-ಇಂಗ್ಲೀಷ್ ಗಳಲ್ಲಷ್ಟೇ ಮುದ್ರಿಸುವುದು ಇತ್ಯಾದಿ ಪತ್ರಿಕಾ ಸುದ್ದಿಗಳನ್ನು ಗಮನಿಸಿದರೆ ಈ ಅಂಶ ಸ್ಪಷ್ಟವಾಗಿದೆ.

ಕರ್ನಾಟಕದ ಸೌಲಭ್ಯಗಳನ್ನು ಬಳಸಿಕೊಂಡೇ ಕನ್ನಡದ ವಿರುದ್ಧ ನಿಲ್ಲುವ ಇಂತಹ ಧೋರಣೆಗಳನ್ನು ಕನ್ನಡಿಗರು ಗಂಭೀರವಾಗಿ ಚಿಂತಿಸಬೇಕಾಗಿದೆ. ಕರ್ನಾಟಕದ ಹಿತಕ್ಕೆ ಪೂರಕವಾಗುವ ರೀತಿಯಲ್ಲಿ ಭಾಷಾ ಅಲ್ಪಸಂಖ್ಯಾತರ ಚಟುವಟಿಕೆಗಳನ್ನು ನಿಯಂತ್ರಿಸಬೇಕಾಗಿದೆ. ಈ ಅಕಾಡೆಮಿ ಮತ್ತು ಸಂಸ್ಥೆಗಳಲ್ಲಿ ಸರ್ಕಾರ ಸದಸ್ಯರನ್ನು ನೇಮಿಸುವಾಗ ಕನ್ನಡ ಸಾಹಿತಿಗಳೊಬ್ಬರನ್ನು ತಪ್ಪದೇ ನೇಮಿಸಬೇಕಾಗಿದೆ. ಇವುಗಳ ಚಟುವಟಿಕೆಗಳು ಸಂಪೂರ್ಣವಾಗಿ ಕನ್ನಡದಲ್ಲೇ ನಡೆಯುವಂತೆ, ಪಾರದರ್ಶಕತೆ ಇರುವಂತೆ ಸೂಚಿಸಬೇಕಾಗಿದೆ. ಇದರಿಂದ ಸೌಹಾರ್ದತೆ ಮತ್ತು ಸಾಮರಸ್ಯ ಬೆಳೆಯುವುದಲ್ಲದೆ ಅಲ್ಪಸಂಖ್ಯಾತ ಭಾಷೆ-ಸಾಹಿತ್ಯಗಳ ಬೆಳವಣಿಗೆಗೆ ವಿಸ್ತಾರವಾದ ವೇದಿಕೆಯೂ ಒದಗಿಸಿದಂತಾಗುತ್ತದೆ. ಈ ಭಾಷೆಗಳು ಬೆಳೆಯಬೇಕಾಗಿರುವುದು ಕನ್ನಡದ ಮೂಲಕವೇ ಆಗಿರುವುದರಿಂದ ಕನ್ನಡದ ಹಿತಕ್ಕೆ ವಿರುದ್ಧವಾಗಿ ನಡೆದುಕೊಳ್ಳುವುದು ತಮ್ಮ ಅಭಿವೃದ್ಧಿಯ ಹಿನ್ನಡೆಯಾಗುತ್ತದೆ ಎಂಬುದನ್ನು ಮನವರಿಕೆ ಮಾಡಿಕೊಡಬೇಕಾಗಿದೆ.

## ೭. ಪುಸ್ತಕಸಂತೆ-ವಿಶಿಷ್ಟ ಯೋಜನೆ

ಕನ್ನಡ ಸಾಹಿತ್ಯ ಪರಿಷತ್ತು ಈ ವರ್ಷದಿಂದ ಈ ವಿಶೇಷ ಯೋಜನೆಯನ್ನು ಪರಿಷತ್ತಿನ ಆವರಣದಲ್ಲಿ ಆರಂಭಿಸುವ ಮೂಲಕ ತನ್ನ ತೊಂಬತ್ತನೇ ವರ್ಷದಲ್ಲಿ ಹೊಸ ಇತಿಹಾಸವನ್ನೂ ಹುಟ್ಟು ಹಾಕಿದೆ. ಪ್ರತಿ ಶನಿವಾರ ಸಂಜೆ ವೇಳೆ ನಡೆಯುವ ಈ ಪುಸ್ತಕ ಸಂತೆಯಲ್ಲಿ ಕನ್ನಡ ಪುಸ್ತಕಗಳ ಮಾರಾಟ ಭರದಿಂದ ನಡೆಯುತ್ತಿದೆ. ಪರಿಷತ್ತಿನ ಪ್ರಕಟನೆಗಳ ಜೋತೆಗೆ ಆಸಕ್ತ ಪ್ರಕಾಶಕ-ಲೇಖಕರ ಪ್ರಕಟನೆಗಳೂ ಈ ಸಂತೆಯಲ್ಲಿ ಲಭ್ಯ. ಸಂತೆಗೆ ಜನರನ್ನು ಆಕರ್ಷಿಸಲು ಪರಿಷತ್ತು ಭಾಷಣ-ಭಾವಗೀತೆ-ನೃತ್ಯಗಳಂತಹ ಸಾಂಸ್ಕೃತಿಕ ಕಾರ್ಯಕ್ರಮವನ್ನೂ ಏರ್ಪಡಿಸುತ್ತಿದೆ.

ಆರಂಭದ ವಾರಗಳಲ್ಲಿ ಬರುತ್ತಿದ್ದರಾದರೂ ಈಚಿಗೆ ಕಡಿಮೆಯಾಗಿದ್ದಾರೆ, ಪ್ರಕಾಶಕರೂ ಹಿಂದೆ ಸರಿದಿದ್ದಾರೆ. ಹಳೆಯ ಪುಸ್ತಕಗಳ ಮಾರಾಟಗಾರರೇ ಅಧಿಕವಾಗುತ್ತಿದ್ದಾರೆ ಈ ಬಗ್ಗೆ ಪರಿಷತ್ತು ಪುನರಾಲೋಚಿಸಿ ಪ್ರಕಾಶಕರು ಮತ್ತು ಕೊಳ್ಳುವವರು ಹೆಚ್ಚಿನ ಸಂಖ್ಯೆಯಲ್ಲಿ ಆಕರ್ಷಿತರಾಗುವಂತೆ ಅಗತ್ಯ ಕ್ರಮಗಳನ್ನು ಕೈಗೊಳ್ಳುವುದು ಸೂಕ್ತ. ಇದೊಂದು ಅತ್ಯುತ್ತಮ ಯೋಜನೆ. ಬದಲಾದ ಸಮಾಜಕ್ಕೆ ಅಗತ್ಯವಾದ ಹೊಸ ಚಿಂತನೆ. ಇದನ್ನು ಯಶಸ್ವಿಯಾಗಿಸುವತ್ತ ಎಲ್ಲರೂ ಯೋಚಿಸೋಣ.

## ೮. ಶ್ರೀ ಗುರು ತುಳಸಿರಾಮದಾಸರ ಶತಮಾನೋತ್ಸವ

19ನೇ ಶತಶತಮಾನದಲ್ಲಿ ಇನ್ನೊಂದು ಹರಿದಾಸ ಚಳುವಳಿಯನ್ನೇ ಹುಟ್ಟುಹಾಕಿದ ಪ್ರಮುಖ ಹರಿದಾಸರಾದ ತುಳಸಿರಾಮದಾಸರು ಕ್ರಿ.ಶ. 1873 ರಿಂದ 1903 ರವರೆಗೆ ಬೆಂಗಳೂರನ್ನು ಕೇಂದ್ರವಾಗಿಟ್ಟುಕೊಂಡು ಕೋಲಾರದಿಂದ ಮೈಸೂರಿನವರಿಗೆ ಇಡೀ ದಕ್ಷಿಣ ಕರ್ನಾಟಕದ್ಯಾಂತ ಧಾರ್ಮಿಕ ಅಂದೋಲನವನ್ನು ನಡೆಸಿದ್ದರು. ಹರಿಕಥೆ. ಭಜನೆ. ರಾಮೋತ್ಸವಗ ಮೂಲಕ

**ಸಮಾಜದ ಜನರಲ್ಲಿ ಜಾಗೃತಿ ಮೂಡಿಸಿದ ಕ್ರಾಂತಿಪುರುಷರಾಗಿದ್ದರು :** ಎರಡನೇ ರಾಮಾವತಾರ ಎಂದೇ ಖ್ಯಾತನಾಮರಾಗಿದ್ದ ಶ್ರೀ ಗುರು ತುಳಸಿರಾಮ ದಾಸರು ಜಾತಿ ಮತ ಭೇದವಿಲ್ಲದೆ ವೈದಿಕರಿಂದ ಶೂದ್ರರವರೆಗೆ ಎಲ್ಲ ವರ್ಗದ ಜನರನ್ನು ಶಿಷ್ಯರನ್ನಾಗಿಸಿಕೊಂಡು ಅವರುಗಳ ಮೂಲಕ ಜನ-ಮನದಲ್ಲಿ ಧರ್ಮ ಶ್ರದ್ಧೆ, ನೈತಿಕಮೌಲ್ಯ, ಸಾಮಾಜಿಕ ಜವಾಬ್ದಾರಿಗಳನ್ನು ಬಿತ್ತಿ ಅರಾಜಕವಾಗಿದ್ದ ಆ ಕಾಲದ ಸಮಾಜದಲ್ಲಿ ಸಂಸ್ಕೃತಿಕ ಸಮಾವೇಶಗಳನ್ನು ಮಾತ್ತ ಭೀತಗೊಂಡಿದ್ದ, ಮತಾಂತರಗೊಳ್ಳುತ್ತಿದ್ದ, ಜನರಲ್ಲಿ ಧೈರ್ಯವನ್ನು ತುಂಬಿ ಸಮಾಜವನ್ನು ಕಟ್ಟಿಕೊಟ್ಟು ಪವಾಡ ಪುರುಷರಾಗಿದ್ದಾರೆ.

ಇವರು ಪರವಂತದಿಸಿದ ಮೂರು ವರ್ಷಗಳ ನೆನೆಪಿಗೆ ಕಳೆದ ವರ್ಷದಿಂದ ಮುಳಬಾಗಿಲಿನ ದಾಸರೇ ದೇವರಾಗಿರುವ ತುಳಸಿರಾಮ ದೇವಾಲಯದಲ್ಲಿ ಶತಮಾನೋತ್ಸವವನ್ನು ಆರಂಭಿಸಲಾಗುತ್ತಿದ್ದು ಬರುವ 6- 9-05 ರಂದು ಬೆಂಗಳೂರಿನಲ್ಲಿ ಅದರ ಉದ್ಘಾಟನೆಯನ್ನು 'ಶ್ರೀಗುರು ತುಳಸಿರಾಮದಾಸರು' ಎಂಬ ಪುಸ್ತಕವನ್ನು ಬಿಡುಗಡೆ ಮಾಡಲಾಗುತ್ತಿದೆ. ಕರುನಾಡು ಕಲಾವೇದಿಕೆ ಈ ಕಾರ್ಯಕ್ರಮವನ್ನು ಆಯೋಜಿಸಿದೆ.

ತುಳಸಿರಾಮದಾಸರ 25 ಕನ್ನಡಹಾಡುಗಳು ಮತ್ತು ದಾಸರನ್ನು ಕುರಿತು ಅವರ ಶಿಷ್ಯದಾಸರುಗಳು ರಚಿಸಿರುವ 25 ಕನ್ನಡ ಕೀರ್ತನೆಗಳನ್ನು ತುಳಸಿರಾಮದಾಸರ ಜೀವನಚರಿತ್ರೆಯನ್ನೂ ಈ ಪುಸ್ತಕ ಒಳಗೊಂಡಿದೆ. ಸಾಹಿತಿಗಳಾದ ಪ್ರೊ॥ ನಾ ಗೀತಾಚಾರ್ಯ ಅವರು ಇದನ್ನು ಸಂಪಾದಿಸಿದ್ದರಾರೆ. ಪ್ರಸಿದ್ಧ ಸಾಹಿತಿಗಳೂ ಜನಪ್ರಿಯ ಕವಿಗಳೂ ಆದ ಪ್ರೊ॥ ದೊಡ್ಡರಂಗೇಗೌಡ ಅವರು ಈ ಪುಸ್ತಕವನ್ನು ಬಿಡುಗಡೆ ಮಾಡಿದ್ದರು. ಪ್ರಸಿದ್ಧ ವಿಮರ್ಶಕರಾದ ಡಾ॥ ನರಹಳ್ಳಿ ಬಾಲಸುಬ್ರಹ್ಮಣ್ಯ ಅವರ ಅಧ್ಯಕ್ಷತೆಯಲ್ಲಿ ನಡೆಯುವ ಈ ವಿಶೇಷ ಸಮಾರಂಭದಲ್ಲಿ ದಾಸರ ಶಿಷ್ಯರಾದ ಚೌಡಯ್ಯ ದಾಸರು ಮತ್ತು ಮೈಸೂರಿನ ಸಾಹಿತಿಗಳಾದ ಡಾ॥ ನೀ. ಕೃ. ರಾಮಶೇಷನ್ ಮುಖ್ಯ ಅತಿಥಿಗಳಾಗಿದ್ದರು.

ಮಾನ್ಯ ತೋಟಗಾರಿಕೆ ಇಲಾಖೆಯ ಸಚಿವರೂ ದಾಸರ ಶಿಷ್ಯರೂ ಆದ ಶ್ರೀ ಆಲಂಗೂರು ಶ್ರೀನಿವಾಸ್ ಅವರು ಈ ಶತಮಾನೋತ್ಸವವನ್ನು ನಡೆಸುತ್ತಿರುವ ಪುಸ್ತಕ ಸಂಪಾದಕರೂ ಆದ ಪ್ರೊ॥ ಗೀತಾಚಾರ್ಯರನ್ನು ಗೌರವಿಸಿದರು.

ಶ್ರೀ ತುಳಸಿರಾಮದಾಸರ ಶತಮಾನೋತ್ಸವ ಸಮಿತಿಯು ದಾಸರ ಅಪ್ರಕಟಿತ ಕೀರ್ತನೆಗಳನ್ನು ದಾಸರ ಶಿಷ್ಯರುಗಳ ಹಾಡುಗಳನ್ನೂ ಶೋಧಿಸುವ ಯೋಜನೆಯನ್ನು ಹಾಕಿಕೊಂಡಿದ್ದು ಅವುಗಳನ್ನೆಲ್ಲ ಪುಸ್ತಕ ರೂಪದಲ್ಲಿ ಪ್ರಕಟಿಸುವುದಲ್ಲದೆ ತುಳಸಿರಾಮದಾಸರನ್ನು ಪರಿಚಯಿಸಲು, ಅವರ ಸಾಹಿತ್ಯ ಶೋಧನೆಗಳನ್ನು ಗುರುತಿಸಲು ವಿಚಾರಗೋಷ್ಠಿ ಹಾಗೂ ಉತ್ಸವ ಕಾರ್ಯಕ್ರಮಗಳನ್ನು ಹಲವು ಕಡೆ ನಡೆಸಲು ಯೋಜಿಸಿದೆ ಎಂದರು. (ವ್ಯ.ಸಂ.)

* * * *

# ಅಭಿನಂದನೆಗಳು

**ಈ ಅವಧಿಯಲ್ಲಿ ಹಲವು ಪ್ರಶಸ್ತಿ / ಪುರಸ್ಕಾರ / ಬಹುಮಾನಗಳು ಈ ಕೆಳಕಂಡ ಮಹನೀಯರಿಗೆ ಲಭ್ಯವಾಗಿವೆ.**

**ಕಾವ್ಯನಂದ ಪ್ರಶಸ್ತಿ :** ಶ್ರೀ ಚನ್ನಬಸಪ್ಪ ಬೆಟ್ಟದೂರು ಅವರಿಗೆ (ಕೃತಿ : ಸಲ್ಲುತ ಸನ್ಮಾರ್ಗ)

**ಮಹಾವೀರ ರತ್ನಾಕರವರ್ಣಿ ಪ್ರಶಸ್ತಿ :** ಶ್ರೀ ಅ. ನಾ. ಚಂದ್ರಕೀರ್ತಿಯವರಿಗೆ ಸ್ವಸ್ತಿಶ್ರೀ ಚಾರುಕೀರ್ತಿ ಪಂಡಿತಾಚಾರ್ಯ ಸ್ವಾಮಿಜೀಯವರು 'ಮಹಾಕವಿ ರತ್ನಾಕರವರ್ಣಿ ಪ್ರಶಸ್ತಿ'ಯನ್ನು ಪ್ರಧಾನ ಮಾಡಿದರು.

**ಕುವೆಂಪು ಪ್ರಶಸ್ತಿ :** ಡಾ|| ಜಿ. ಎಸ್. ಶಿವರುದ್ರಪ್ಪ ಅವರಿಗೆ ಈ ಪ್ರಶಸ್ತಿಯನ್ನು ನೀಡಿ ಪುರಸ್ಕರಿಸಲಾಯಿತು.

**ಅ. ನ. ಕೃ.-ನಿರ್ಮಾಣ ಪ್ರಶಸ್ತಿ :** ಡಾ|| ದೇ. ಜವರೇಗೌಡ ಅವರಿಗೆ ಈ ಪ್ರತಿಷ್ಠಿತ ಪ್ರಶಸ್ತಿ ನೀಡಿ ಗೌರವಿಸಲಾಯಿತು.

**ಮಾಸ್ತಿ ಪ್ರಶಸ್ತಿ :** ಪ್ರಸಿದ್ಧ ಸಾಹಿತ್ಯ ಭಾಷಾ ತಜ್ಞ ಪ್ರೊ|| ಜಿ. ವೆಂಕಟಸುಬ್ಬಯ್ಯ ರವರಿಗೆ

**ಸಂಗೀತ ಕಲಾ ರತ್ನ :** ವಿದ್ವಾನ್ ಮಧುರೈ ಟಿ. ಎನ್. ಶೇಷಗೋಪಾಲ್ ಅವರಿಗೆ

'ಕರ್ನಾಟಕ ರತ್ನ'-ಈ ಭೀಮಸೇನ ಜೋಶಿ;

'ಪಂಪ ಪ್ರಶಸ್ತಿ'-ಡಾ||ಹೆಚ್.ಎಲ್. ನಾಗೇಗೌಡ;

'ಕನಕ ಪುರಂದರ ಪ್ರಶಸ್ತಿ'-ಹಾರ್ಮೋನಿಯಂ ವಾದಕ ವಿದ್ವಾನ್ ವಸಂತ ಕನಕಾಪುರ (ಧಾರವಾಡ);

'ದಾನ ಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ'- ಡಾ|| ಸುನೀತಾ ಶೆಟ್ಟಿ;

'ಜಾನಪದಶ್ರೀ'-ಚನ್ನಪ್ಪ ವೀರಭದ್ರಪ್ಪ ಕರಡಿ (ಮುಧೋಳ್);

'ಡಾ|| ಗುಬ್ಬಿವೀರಣ್ಣ ಪ್ರಶಸ್ತಿ'-ಎಲ್. ಬಸವರಾಜ್ ಗುಡಿಗೇರಿ (ಕುಂದಗೋಳ);

'ವರ್ಣಶಿಲ್ಪ ವೆಂಕಟಪ್ಪ ಪ್ರಶಸ್ತಿ'- ಯೂಸೂಫ್ ಅರಕಲ್ (ಬೆಂಗಳೂರು);

'ಸಂತಶಿಶುನಾಳ ಪ್ರಶಸ್ತಿ'-ಶ್ರೀ ಕೃಷ್ಣದಾಸ ಮುರುಗೋಡ್ (ಬೆಳಗಾವಿ);

'ಜಕಣಾಚಾರಿ ಪ್ರಶಸ್ತಿ'-ಶ್ರೀ ಕಾಶೀನಾಥ್ (ಶಿವಮೊಗ್ಗ).

**ಟಿ. ಚೌಡಯ್ಯ ರಾಷ್ಟ್ರೀಯ ಪ್ರಶಸ್ತಿ :** 2003 ನೇ ಸಾಲಿನ ಪ್ರಶಸ್ತಿ ಪಿಟೀಲುವಾದಕ ಪಂಡಿತ ಜಿ. ಆರ್. ನಿಂಬರಗಿಯುವರಿಗೆ; 2004ನೇ ಸಾಲಿನ ಪ್ರಶಸ್ತಿ ವೇಣುವಾದಕ ವಿದ್ವಾನ್ ಡಾ|| ಎನ್. ರಮಣಿಯವರಿಗೆ

**ಅನುಪಮ ಪ್ರಶಸ್ತಿ :** ಶ್ರೀಮತಿ ಗೀತಾನಾಗಭೂಷಣ (ಅಧ್ಯಕ್ಷರು, ಕನ್ನಡ ಸಾಹಿತ್ಯ ಅಕಾಡೆಮಿ) ಅವರಿಗೆ

**ಶಿವರಾಮ ಕಾರಂತ ಪ್ರಶಸ್ತಿ :** ಖ್ಯಾತ ಸಾಹಿತಿ ಶ್ರೀಮತಿ ಹೆಚ್. ಎಸ್. ಪಾರ್ವತಿಯವರಿಗೆ

**ಟಿ. ಎಸ್ಸಾರ್ ಪ್ರಶಸ್ತಿ :** ಖ್ಯಾತ ಪತ್ರಕರ್ತೆ, ನಿವೃತ್ತ ಆಕಾಶವಾಣಿ ಅಧಿಕಾರಿ ಶ್ರೀಮತಿ ನಾಗಮಣಿ ಎಸ್. ರಾವ್ ರವರಿಗೆ

**ಸಾವಿತ್ರಮ್ಮ ದತ್ತಿ ಮಹಿಳಾ ಸಾಹಿತ್ಯ ಪ್ರಶಸ್ತಿ :** ಹಂಪಿಯ ಡಾ|| ಶೈಲಜಾ ಹಿರೇಮಠ ಅವರ 'ಸ್ತ್ರೀ ಕಥನ' ಸಂಶೋಧನಾ ಕೃತಿಗೆ

**ಅನಂತರಂಗ ದತ್ತಿ ಸಂಶೋಧನಾ ಸಾಹಿತ್ಯ ಪ್ರಶಸ್ತಿ :** ಡಾ|| ಎಫ್. ಟಿ. ಹಳ್ಳಿಕೇರಿಯವರ 'ಕಂಠಪತ್ರ' ಕೃತಿಗೆ

**ಚಿದಾನಂದ ಪ್ರಶಸ್ತಿ :** ಶ್ರೇಷ್ಠ ಸಾಹಿತಿಗಳು ಹಾಗೂ ಸಂಗೀತ ಶಾಸ್ತ್ರ ಸಂಶೋಧಕರೂ ಆದ ಡಾ|| ರಾ. ಸತ್ಯನಾರಾಯಣ ಅವರಿಗೆ

**ಶಾಂತಲಾ ನಾಟ್ಯ ಪ್ರಶಸ್ತಿ :** (2004) ಹಿರಿಯ ಕಲಾವಿದೆ ಶ್ರೀಮತಿ ಜಯಲಕ್ಷ್ಮಿ ಆಳ್ವ ಅವರಿಗೆ

**ಬಸವ ಪುರಸ್ಕಾರ :** (2004) ನಗರದ ಸುಮಂಗಲಿ ಸೇವಾ ಸಂಸ್ಥೆಯು ಶ್ರೀಮತಿ ಸುಶೀಲಮ್ಮ ಅವರಿಗೆ

**ರತ್ನಮ್ಮ ಹೆಗ್ಗಡೆ ಗ್ರಂಥ ಪ್ರಶಸ್ತಿ :** ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘವು ಶ್ರೇಷ್ಠ ಕನ್ನಡ ಕೃತಿಗಳಿಗೆ ಕೊಡಮಾಡುವ 'ಮಾತೋಶ್ರೀ ರತ್ನಮ್ಮ ಹೆಗ್ಗಡೆ' ಗ್ರಂಥ ಬಹುಮಾನವು ಮೈಸೂರಿನ ಡಾ|| ಪದ್ಮಾಶೇಖರ ಅವರ 'ಉರಿಯ ಚಪ್ಪರ' ಕವನ ಸಂಕಲನಕ್ಕೆ ದೊರೆತಿದೆ. ದ್ವಿತೀಯ ಬಹುಮಾನ ಡಾ|| ಟಿ. ಸಿ. ಪೂರ್ಣಿಮಾರವರ 'ಭೂಮಿ ನಿನ್ನದಲ್ಲ ಹಾಗೂ ಮಂಗಳೂರಿನ ಡಾ|| ಮೀನಾ ಅವರ 'ಆಸೆಗಿಷ್ಟು ಬಣ್ಣ ಹಚ್ಚಿ' ಕಥಾ ಸಂಕಲನಕ್ಕೆ; ತೃತೀಯ ಬಹುಮಾನ ಬೆಂಗಳೂರಿನ ಪ್ರೊ|| ಅನುಸೂಯಾದೇವಿಯವರ 'ಉರಿ ಬೇಲಿ' ಕಥಾ ಸಂಕಲನಕ್ಕೆ

**ಆರ್. ಎನ್. ಆರ್. ಪ್ರಶಸ್ತಿ :** ಮಲ್ಲಿಗೆ ಮಾಸ ಪತ್ರಿಕೆಯ ಸಹ ಸಂಪಾದಕ ಶ್ರೀ ಎನ್. ಎಸ್. ಶ್ರೀಧರಮೂರ್ತಿಯವರಿಗೆ

**ಭಾರತರತ್ನ ಸರ್ ಎಂ. ವಿಶ್ವೇಶ್ವರಯ್ಯ ಇಂಜನಿಯರಿಂಗ್ ಪ್ರತಿಷ್ಠಾನ ಪ್ರಶಸ್ತಿಗಳು:**

**ರಾಷ್ಟ್ರೀಯ ಸದ್ಭಾವನಾ ಪ್ರಶಸ್ತಿ :** ಶ್ರೀ ಎಸ್. ಚಿನ್ನಸ್ವಾಮಿ, ಶ್ರೀಮತಿ ವೀಣಾಧರಿ, ಶ್ರೀ ಟಿ. ಎಲ್. ರಾಘವನ್, ಡಾ|| ಬಿ. ರಮೇಶ್, ಶ್ರೀ ಮಧುಸೂಧನ ಗುಪ್ತ, ಶ್ರೀಮತಿ ಪಾರ್ವತಿ ರಾಮಕೃಷ್ಣಯವರಿಗೆ

**(ಅ) ವಿಶ್ವೇಶ್ವರಯ್ಯ ಸಾಹಿತ್ಯ ಪ್ರಶಸ್ತಿ :** ಶ್ರೀ ರವಿ ಬೆಳಗೆರೆ, ಶ್ರೀ ಚಂದ್ರಕಾಂತ ಪೋಕಳೆ, ಶ್ರೀ ಡಿ. ಎನ್. ಶ್ರೀನಾಥ, ಶ್ರೀಮತಿ ಭಾರತಿ ಮೋಹನ ಶೋಲೆ, ಶ್ರೀ ಆದ್ಯರಾಮಾಚಾರ್ಯ, ಶ್ರೀ ಶೇಷನಾರಾಯಣ, ಶ್ರೀಮಾರ್ಕಂಡಪುರಂ ಶ್ರೀನಿವಾಸ, ಶ್ರೀ ಜಯಸಿಂಹ, ಡಾ|| ಎಚ್. ಎಸ್. , ಶ್ರೀಮತಿ, ಕೆ. ವಿ. ಮಂಜುನಾಥ ಅವರಿಗೆ

**ವಿಶ್ವೇಶ್ವರಯ್ಯ ಪ್ರಶಸ್ತಿ :** ರಾಜ್ಯದ 18 ಜನ ಗಣ್ಯರಿಗೆ ನೀಡಿ ಗೌರವಿಸಲಾಗಿದೆ.

ಮೇಲ್ಕಂಡ ಎಲ್ಲಾ ಪ್ರಶಸ್ತಿ / ಬಹುಮಾನ ವಿಜೇತರಿಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಕರ್ನಾಟಕ ಲೋಚನದ ಮೂಲಕ ಹಾರ್ದಿಕವಾಗಿ ಅಭಿನಂದಿಸುತ್ತದೆ. ಹಾಗೂ ಶುಭಾಶಯ ಆಶಿಸುತ್ತದೆ.

# ಶ್ರದ್ಧಾಂಜಲಿ

**1) ಡಾ॥ ಹೆಚ್. ನರಸಿಂಹಯ್ಯ :** (85) ಖ್ಯಾತ ಶಿಕ್ಷಣ ತಜ್ಞ, ವಿಜ್ಞಾನಿ ಹಾಗೂ ಸಮಾಜ ಸೇವಾ ಧುರೀಣರಾಗಿದ್ದ ಡಾ। ಹೆಚ್. ನರಸಿಂಹಯ್ಯನವರು ತಮ್ಮ ಬಹುಮುಖ ಪ್ರತಿಭೆಯಿಂದ ಹಾಗೂ ಕರ್ನಾಟಕದಲ್ಲಿ ಶೈಕ್ಷಣಿಕ ಸೇವೆಗಳಿಂದ ಅಪಾರ ಜನಪ್ರಿಯರಾಗಿದ್ದರು. ಇವರು ನ್ಯಾಷನಲ್ ಕಾಲೇಜನಲ್ಲಿ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಪ್ರಾಂಶುಪಾಲರಾಗಿ, ಸಂಸ್ಥೆಯ ಅಧ್ಯಕ್ಷರಾಗಿ ಅದರ ಪ್ರಗತಿಗಾಗಿ ಅಹರ್ನಿಶಿ ಶ್ರಮಿಸಿದ ಪ್ರಾಜ್ಞರು. ತಮ್ಮ ವೈಜ್ಞಾನಿಕ ಮನೋಭೂಮಿಕೆಯನ್ನು ಸದಾ ಪ್ರದರ್ಶಿಸುತ್ತಾ ಮೂಢನಂಬಿಕೆಯನ್ನು ತೊಲಗಿಸಲು ಶ್ರಮಿಸಿದವರು. ಬೆಂಗಳೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿ ಶೈಕ್ಷಣಿಕ ಕ್ಷೇತ್ರಕ್ಕೆ ಹೊಸ ನಿಲುವನ್ನು ನೀಡಿದವರು. ಇವರ ಬಹುಮುಖ ಪ್ರತಿಭೆಯನ್ನು ಗೌರವಿಸಿ ಕೇಂದ್ರ ಸರ್ಕಾರ ಪದ್ಮಭೂಷಣ ಪ್ರಶಸ್ತಿ ನೀಡಿ ಪುರಸ್ಕರಿಸಿದೆ. ಇವರ (ಆತ್ಮ ಕಥೆ) ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯಿಂದ ಬಹು[illegible] ಲಭಿಸಿದೆ. ಇವರ ಜೀವಿತ ಕಾಲ : (ಜೂನ್ 1920-ಜನವರಿ [illegible] ದಿನಾಂಕ 30-1-05 ರಂದು ನಿಧನರಾದರು.

**2) ಸಿ. ಡಿ. ನರಸಿಂಹಯ್ಯ :** (84) ಖ್ಯಾತ ಇಂಗ್ಲೀಷ್ ವಿದ್ವಾಂಸರು. 29ನೇ ವಯಸ್ಸಿಗೆ ಪ್ರಾಧ್ಯಾಪಕರಾದ ಹೆಗ್ಗಳಿಕೆ ಇವರದು. ಇವರು ಇಂಗ್ಲೀಷ್ ಸಾಹಿತ್ಯದ ಅತ್ಯುಗ್ರ ಪ್ರತಿಪಾದಕರಾಗಿದ್ದರು. 1950-79ರ ವರೆಗೆ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದರು. 5 ವರ್ಷಕಾಲ ಮಹಾರಾಜ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿದ್ದರು. ಇವರಿಗೆ ರಾಜ್ಯೋತ್ಸವ ಪ್ರಶಸ್ತಿ (1987), ಪದ್ಮಭೂಷಣ ಪ್ರಶಸ್ತಿ (1990) ಲಭಿಸಿವೆ. ಇವರ ಕೃತಿಗಳು : ಎನ್ ಫಾರ್ ನೋ ಬಡಿ', 'ದಿ ಸ್ವಾನ್ ಅಂಡ್ ದಿ ಈಗಲ್'. 'ದಿ ಲಿಟರರಿ ಕ್ರೈಟೇರಿಯನ್' ಇವರು ಬಹುಕಾಲ ಸಂಪಾದಕರಾಗಿ ನಡೆಸಿದ ಪತ್ರಿಕೆ. ಕರ್ನಾಟಕದ ಶಾಂತಿನಿಕೇತನ ಎಂದು ಹೆಸರಾದ ಧ್ವನ್ಯಾಲೋಕದ ಸ್ಥಾಪಕರು. ಇವರ ಜೀವಿತಕಾಲ (1921-2005). ನಿಧನ :

**3) ಬಿ. ಸಿ. ರಾಮಚಂದ್ರ ಶರ್ಮ :** ನವ ಪ್ರಜ್ಞೆಯ ಖ್ಯಾತ ಕವಿ, ನಾಟಕಕಾರ, ಹಾಗೂ ಕಥೆಗಾರ. ಅಧ್ಯಾಪಕರಾಗಿ ಯುಥೋಪಿಯೋ ಇಂಗ್ಲೆಂಡಿನಲ್ಲಿ ಸೇವೆ ಸಲ್ಲಿಸಿ ಬೆಂಗಳೂರಿಗೆ ಆಗಮಿಸಿ ಪೂರ್ಣ ಕಾಲವನ್ನು ಸಾಹಿತ್ಯ ಸೇವೆಗಾಗಿ ತೊಡಗಿಸಿಕೊಂಡಿದ್ದರು. 'ನೆರಳು' ನಾಟಕಕ್ಕೆ ಸಾಹಿತ್ಯ ಅಕಾಡೆಮಿ ಬಹುಮಾನ, 'ಸಪ್ತಪದಿ' ಕವನ ಸಂಗ್ರಹಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ. ಇವರ ಪ್ರಮುಖ ಕೃತಿಗಳು : ಹೃದಯಗೀತೆ, ಮಾತುಮಾಟ, ಹೆಸರಗತ್ತೆ (ಕವನ ಸಂಕಲನಗಳು), ಏಳು ಸುತ್ತಿನ ಕೋಟೆ, ಬಾಳಸಂಜೆ, ವೈತರಣಿ (ನಾಟಕಗಳು), ಮಕ್ಕಳ ಬುದ್ಧಿ ಮತ್ತು ಪರಿಸರ (ಮನಶ್ಶಾಸ್ತ್ರೀಯ ಗ್ರಂಥ) ಕೇಂದ್ರ ಸಾಹಿತ್ಯ ಅಕಾಡೆಮಿಗೆ ಒಂದು ಕಥಾ ಸಂಕಲನವನ್ನು ಸಂಪಾದಿಸಿಕೊಟ್ಟಿರುತ್ತಾರೆ. ಜೀವಿತ ಕಾಲ : 28-11-1925 ರಿಂದ 18-4-05.

**4) ಎನ್. ಕೆ. ಕುಲಕರ್ಣಿ (ನಾನಿಕಾಕ)** (93) : ಸಾಹಿತ್ಯ ಕ್ಷೇತ್ರದಲ್ಲಿ 'ಎನ್ಕೆ' ಎಂದೇ ಖ್ಯಾತರಾಗಿದ್ದ ಆಕಾಶವಾಣಿಯ ನಿರ್ದೇಶಕ. ಏಕಾಂತ ನಾಟಕಗಳು ಹಾಗೂ ವಿಡಂಬನ ಸಾಹಿತ್ಯ ಪ್ರಬಂಧ ಸಾಕಷ್ಟು ಮಹತ್ತರ ಕೊಡುಗೆಗಳನ್ನು ನೀಡಿರುತ್ತಾರೆ. ಕಾದಂಬರಿ ಕ್ಷೇತ್ರವನ್ನೂ ಸಂಪನ್ನಗೊಳಿಸಿದ್ದಾರೆ. ಇವರ ಪ್ರಮುಖ ಕೃತಿಗಳು : ಎಲೆಕ್ಷನ್, ಬಿಸ್ಕೇಟು, ಕಾವ್ಯದ ಕಾರ್ಖಾನೆ, ಬೆಳ್ಳಿ ಹಬ್ಬ, (ಏಕಾಂಕ ನಾಟಕಗಳು) ಸಾವಿನ ಉಡಿಯಲ್ಲಿ, ಎರಡನೆ ಸಂಬಂಧ, ವೈನಿ, ಗೌರಿಶಂಕರ, ಲಲಿತಾ, ಮೂರು ತಲೆಮಾರು, ವಿಧುರ ವೈರಾಗ್ಯ (ಕಾದಂಬರಿಗಳು), ಸಾಹಿತ್ಯ ವಾಹಿನಿ, ಕುಮಾರವ್ಯಾಸ ಭಾರತ, ಕುಮಾರವ್ಯಾಸ ಕೋಶ ಕುಮಾರವ್ಯಾಸ ಮತ್ತು ಕೃಷ್ಣಕಥೆ, (ವಿಮರ್ಶಾ ಕೃತಿಗಳು) ಮುಂಗಾಲ್‌ಪುಟಗೆ, ಮೊಡಕಾ ಬಜಾರ್, (ಪ್ರಬಂಧಗಳು) 'ಕವಿಹೃದಯ ಕಣ್ತೆರೆದಿತ್ತು' ಮತ್ತು 'ಪಲ್ಲವಿ' 'ದುಂದುಭಿ' ರಾಷ್ಟ್ರೀಯ ನಾಟಕಗಳಾಗಿ ಎಲ್ಲಾ ಕೇಂದ್ರಗಳಿಂದಲೂ ಪ್ರಸಾರಗೊಂಡಿವೆ. ಇವರಿಗೆ ಕನ್ನಡ ಸಾಹಿತ್ಯ ಅಕಾಡೆಮಿ ಬಹುಮಾನ, ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ವಿಶ್ವವಿದ್ಯಾನಿಲಯದ ಡಾಕ್ಟರೇಟ್ ಲಭಿಸಿದೆ. ಜೀವಿತ ಕಾಲ : 29-8-1913 ರಿಂದ 23-4-2005.

**5) ಪ್ರೊ|| ವೇಣುಗೋಪಾಲ ಕಾಸರಗೋಡು** : (57) ಕಾಸರಗೋಡು ಜಿಲ್ಲೆಯ ಕಾರಡ್ಕದಲ್ಲಿ ಜನಿಸಿದ ಶ್ರೀಯುತರು ಬಹುಮುಖ ಪ್ರತಿಭಾವಂತರು. ಕಥೆ, ಕಾದಂಬರಿ, ನಾಟಕ, ವಿಮರ್ಶೆ, ಅನುವಾದ ಕ್ಷೇತ್ರಗಳಲ್ಲಿ ಸುಮಾರು 20 ಕೃತಿಗಳನ್ನು ರಚಿಸಿರುತ್ತಾರೆ. ಸಾಹಿತ್ಯ ಅಕಾಡೆಮಿ ಬಹುಮಾನ, ಮುದ್ದಣ್ಣ ಸ್ಮಾರಕ ಪ್ರಶಸ್ತಿ, ರಾಷ್ಟ್ರಕವಿ ಗೋವಿಂದ ಪೈ ಸ್ಮಾರಕ, ಸುವರ್ಣ ಪದಕ ಮುಂತಾದವನ್ನು ಪಡೆದಿರುತ್ತಾರೆ. ರಂಗಭೂಮಿಯಲ್ಲಿ ಮಾಡಿರುವ ಸಾಧನೆಗಳಿಗಾಗಿ ಇವರಿಗೆ ಕರಾವಳಿ ಸಾಂಸ್ಕೃತಿಕ ಪ್ರತಿಷ್ಠಾನದ ಪುರುಷೋತ್ತಮ ಪ್ರಶಸ್ತಿ ದೊರೆತಿದೆ. ನಾಟಕ ಅಕಾಡೆಮಿ ಸದಸ್ಯರಾಗಿಯೂ ಸೇವೆಸಲ್ಲಿಸಿದ್ದಾರೆ. ಜೀವಿತ ಕಾಲ : 10-11-1948 ರಿಂದ 26-5-2005.

**6) ಪ್ರೊ|| ಎನ್. ಎಸ್. ರಾಮಸ್ವಾಮಿ ಅಯ್ಯರ್** : (86) ಸಾಗರದ ನೆಹರೂ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ, ಪ್ರಾಚಾರ್ಯರಾಗಿ ನಿವೃತ್ತರಾಗಿದ್ದರು. ವುಮೆನ್ಸ್ ಪೀಸ್ ಲೀಗ್ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿಯಾಗಿ ಸೇವೆಸಲ್ಲಿಸಿದ್ದರು. ಎಂ. ವಿ. ಸೀತಾರಾಮಯ್ಯನವರೊಡನೆ ಸುಮಾರು 25 ವರ್ಷಕ್ಕೂ ಹೆಚ್ಚು ಕಾಲ ಸಂಪರ್ಕ ಇರಿಸಿಕೊಂಡಿದ್ದು. 'ಕರ್ನಾಟಕ ಲೋಚನ'ದ ಸಹಾಯಕ ಸಂಪಾದಕರಾಗಿ ಅದರ ಪ್ರಾರಂಭದಿಂದಲೂ ಸಂಪರ್ಕ ಇರಿಸಿಕೊಂಡಿದ್ದರು. ಪ್ರತಿಷ್ಠಾನದ ಕೋಶಾಧಿಕಾರಿಯಾಗಿಯೂ ಸೇವೆ ಸಲ್ಲಿಸಿರುತ್ತಾರೆ. ಇವರು ಒಳ್ಳೆಯ ವಿಮರ್ಶಕರೂ ಸಂಶೋಧಕರೂ ಲೇಖಕರೂ ಸಹ ಆಗಿದ್ದರು. ಇವರ ಅಕಾಲ ಮರಣದಿಂದ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನಕ್ಕೆ ಬಹಳ ನಷ್ಟವಾಗಿದೆ. ಇವರ ನಿಸ್ಪೃಹ ಸೇವೆಯನ್ನು 'ಪ್ರತಿಷ್ಠಾನ' ಮತ್ತು 'ಕರ್ನಾಟಕ ಲೋಚನ' ಸ್ಮರಿಸುತ್ತವೆ.

ಮೇಲ್ಕಂಡ ಪ್ರತಿಭಾವಂತರ ಮರಣಕ್ಕೆ 'ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ' ಮತ್ತು 'ಲೋಚನ' ಅಪಾರ ದುಃಖವನ್ನು ವ್ಯಕ್ತಪಡಿಸುತ್ತಾ ಅವರಿಗೆ ಶ್ರದ್ಧಾಂಜಲಿಯನ್ನು ಅರ್ಪಿಸುತ್ತವೆ.

# ವಿಳಾಸಗಳು

1. ಪ್ರೊ॥ ಸೀತಾರಾವ್ ಜಾಗೀರ್‌ದಾರ್

   ಕಲ್ಪ, 406/ಬಿ-1, ಮುಖ್ಯರಸ್ತೆ -3, ಸರಸ್ವತಿ ಪುರಂ, ಮೈಸೂರು - 9

2. ಕೆ. ಚಂದ್ರಮೌಳಿ

   13 ಡಿ.ವಿ.ಹೆಚ್. ರಸ್ತೆ, ಬಸವನಗುಡಿ, ಬೆಂಗಳೂರು - 4

3. ಅಪ್ಪಣ್ಣ ನರಸಪ್ಪ ಹಂಜೆ, ಸಂಶೋಧನಾ ವಿದ್ಯಾರ್ಥಿ. ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನ ವಿಜ್ಞಾನ ವಿಭಾಗ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ-580 003.

4. ಎಸ್. ಜಗನ್ನಾಥ

   2925, ಸರಸ್ವತಿ ಪುರಂ, 1ನೇ ಮುಖ್ಯರಸ್ತೆ, 5ನೇ ತಿರುವು, ಮೈಸೂರು - 9

5. ನಳಿನಿ ವೆಂಕಟೇಶ್

   15, 'ಮನಸ್ವಿನಿ' ಲಕ್ಷ್ಮಯ್ಯ ಲೇಔಟ್, ಚಿಕ್ಕಲ್ಲಸಂದ್ರ, ಬೆಂ - 61

6. ಪ್ರೊ॥ ಜಿ. ಅಶ್ವತ್ಥನಾರಾಯಣ

   95, 34ನೇ ಬಿ ಕ್ರಾಸ್, 16ನೇ ಮೈನ್,4ನೇ ಬ್ಲಾಕ್, ಜಯನಗರ, ಬೆಂ - 41

7. ಡಾ ॥ ಪಿ.ವಿ. ನಾರಾಯಣ

   30, 'ತಂಗಾಳಿ', ಆರ್.ಬಿ.ಐ. ಕಾಲೋನಿ, ಜಯನಗರ 3ನೇ ಪೂರ್ವ, ಬೆಂ - 11

8. ಎಸ್.ವಿ. ಸಾವಿತ್ರಮ್ಮ

   'ಮಧುರ ಸ್ಮೃತಿ', ಮಲೇಶ್ವರಂ, ಬೆಂ - 3

9. ಎಸ್.ವಿ. ಶ್ರೀನಿವಾಸರಾವ್

   430, 'ಸೌರಭ', 4ನೇ ಮುಖ್ಯ ರಸ್ತೆ, ಶ್ರೀನಗರ, ಬೆಂ - 50

10. ಪ್ರೊ. ನಾ. ಗೀತಾಚಾರ್ಯ

    ಕಾರ್ಯದರ್ಶಿ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಎನ್.ಆರ್. ಕಾಲೋನಿ,ಬೆಂ - 19

11. ಡಾ॥ ಉಪ್ಪಂಗಳ ರಾಮಭಟ್

    ಪರಾಶಿರ, 8-1-64 ಬಿ, ಸುಧೀಂದ್ರ ತೀರ್ಥಮಾರ್ಗ, ಮಂಜಿಬೆಟ್ಟ ಉಡುಪಿ- 2

12. ಪ್ರೊ॥ ಡಿ. ಲಿಂಗಯ್ಯ

    690, 7ನೇ ಬ್ಲಾಕ್, 2ನೇ ಫಸ್, ಬನಶಂಕರಿ 3ನೇ ಹಂತ, ಬೆಂ 88

13. ಮುತ್ತುರಾಜು

    ಕನ್ನಡ ಅಧ್ಯಾಪಕ, ಜವಹಾರ್ ನವೋದಯ ವಿದ್ಯಾಲಯ, ಉಡುವಳ್ಳಿ-572143, ಹಿರಿಯೂರು ತಾ॥, ಚಿತ್ರದುರ್ಗ ಜಿಲ್ಲೆ

## ವಿನಿಮಯ ಪತ್ರಿಕೆಗಳು

೧. ಪ್ರಬುದ್ಧ ಕರ್ಣಾಟಕ, ಮೈಸೂರು ವಿ.ವಿ, ೨. ಸಾಧನೆ ಬೆಂಗಳೂರು, ೩. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ೪. ಮಿಥಿಕ್ ಸೊಸೈಟಿ ಜರ್ನಲ್, ೫. ಬಸವಪಥ, ೬. ಶಂಕರ ಭಾಸ್ಕರ, ೭. ಜಾನಪದ ಜಗತ್ತು, ೮. ಗಾಂಧಿಬಜಾರ್, ೯. ವಿನೋದ, ೧೦. ಹೊಸತು, ೧೧. ಗಾನಕಲಾ ಸಿರಿ, ೧೨. ವಿಜಯ ಸಂಸದ- ಗುರುಸಾರ್ವಭೌಮ, ೧೩. ಅನನ್ಯ, ೧೪. ಅಭಿವ್ಯಕ್ತಿ, ೧೫. ಆದಿಚುಂಚನಗಿರಿ, ೧೬. ಮಲ್ಲಾರ, ೧೭. ಪುಸ್ತಕ ಮಾಹಿತಿ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೮. ಸಂಶೋಧನ ವ್ಯಾಸಂಗ, ಬೆಳಗಾವಿ.

## ಕರ್ನಾಟಕಲೋಚನ ಚಂದಾ ವಿವರ

ವಾರ್ಷಿಕ ಚಂದಾ : ವ್ಯಕ್ತಿಗಳಿಗೆ ರೂ. 40-00
ಗ್ರಂಥಾಲಯ, ಸಂಘ ಸಂಸ್ಥೆಗಳಿಗೆ ರೂ. 100-00
ಆಜೀವ ಚಂದಾ : ರೂ. 400-00
ಬಿಡಿ ಪ್ರತಿ ರೂ. 25-00
ಪ್ರತಿಷ್ಠಾನದ ಸದಸ್ಯತ್ವ : ವಾರ್ಷಿಕ ರೂ. 50-00 ಆಜೀವ ರೂ. 500-00.

**ಪ್ರತಿಷ್ಠಾನದ ಸದಸ್ಯರಿಗೆ ಲೋಚನ ಉಚಿತ ಮತ್ತು ಪ್ರಕಟಣೆಗಳಿಗೆ ಶೇ. 50 ರಿಯಾಯತಿ**


**KARNATAKA LOCHANA**-Half Yearly Journal
Published by **B.M. Sri. Smaraka Prathisthana**
(B.M.SRI. Memorial Foundation)
3rd Main, N.R.Colony, Bangalore-560 019 Ph. : 26615877
e-mail : bmsfdn@yahoo.com-
Website : http:in.members.tripodasia.com/bmsri/
**Printed by : Prathibha Printers, Bangalore-560 019 Ph. 26916918, 26692113**

ಎಂ.ವಿ.ಸೀ.ಯವರು ಸ್ಥಾಪಿಸಿರುವ ಬಿ.ಎಂ.ಶ್ರೀ. ಪ್ರತಿಷ್ಠಾನ ರಜತೋತ್ಸವ ಆಚರಿಸುವಂತಾಗಿರುವುದು ಕನ್ನಡ ವಿದ್ವತ್ ಪರಂಪರೆಗೆ ಸಂದ ಗೌರವವಾಗಿದೆ.

-ಅನಂತಕುಮಾರ್, ಮಾಜಿ ಕೇಂದ್ರ ಸಚಿವರು

ಕನ್ನಡವನ್ನು ಕಟ್ಟಿದ ಆಚಾರ್ಯ ಬಿ.ಎಂ.ಶ್ರೀ.ಯವರ ಸಾಹಿತ್ಯ ಸಾರ್ವಕಾಲಿಕವಾದದ್ದು. ಅದು ಸುಲಭವಾಗಿ ದೊರೆಯುವಂತಾಗಬೇಕು. 'ಶ್ರೀ ಸಾಹಿತ್ಯ' ಪುನರ್ಮುದ್ರಣವಾಗಬೇಕು. ಬಿ.ಎಂ.ಶ್ರೀ. ಪ್ರತಿಷ್ಠಾನಕ್ಕೆ ಸರ್ಕಾರ ನೆರವು ನೀಡಬೇಕು.

-ಹಾರ್ನಳ್ಳಿ ರಾಮಸ್ವಾಮಿ, ಮಾಜಿ ಸಚಿವರು

## ರಜತೋತ್ಸವ ಗ್ರಂಥಮಾಲೆ

| | |
|---|---|
| ೧. ಸಾಹಿತ್ಯೋಪಾಸಕರು (೧೯ನೇ ಶತಮಾನದ ಸಾಹಿತ್ಯ ವಿದ್ವಾಂಸರ ಸಾಧನೆಗಳು) | ರೂ.೨೦೦-೦೦ |
| ೨. ಗ್ರಂಥ ಸಂಪಾದನ ಪರಿಭಾಷಾ ಕೋಶ | ರೂ. ೩೬-೦೦ |
| ೩. ಶ್ರೀಕೃಷ್ಣ ಲೀಲಾ ಗಾನಂ | ರೂ.೧೦೦-೦೦ |
| ೪. ಕನ್ನಡ ತಿರುಕ್ಕುರಳ್ (ಅನುವಾದ) | ರೂ.೧೦೦-೦೦ |
| ೫. ಕಾರಂತ ಕಿರಣ | ರೂ. ೩೦-೦೦ |
| ೬. ತಿಮ್ಮಪ್ಪದಾಸರ ಕೀರ್ತನೆಗಳು | ರೂ. ೭೫-೦೦ |



ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ